ಸ್ಥಾನ ಸಂಖ್ಯೆಯಿಂದ ಸ್ಥಾನ ಸಂಖ್ಯೆಗೆ ಫೋರ್‌ಬೇರಿಂಗ್ ದೂರ

| | | (ಡಿಗ್ರಿಗಳಲ್ಲಿ) | (ಸರಪಳಿಗಳಲ್ಲಿ $66^0$) |
|---|---|---|---|
| 19 | 20 | 340 | 14.00 |
| 20 | 1 | 342 | 30.00 |

**ದಾರಿಯ ಹಕ್ಕುಗಳು:**

(1) **ರಸ್ತೆ:-** ಮಣ್ಣಿನ ರಸ್ತೆಯು ಸರ್ವೆ ನಂ.43ರ ಉತ್ತರ ಭಾಗದಲ್ಲಿ ಬಾಳೆಹೊನ್ನೂರು ಕಳಸ ರಸ್ತೆಯಿಂದ ಪ್ರಾರಂಭಿಸಿ ಪಶ್ಚಿಮದ ಕಡೆಗೆ ಅರಣ್ಯದೊಳಗೆ ನಕಾಶೆಯಲ್ಲಿದಂತೆ ಹಾದು ಹೋಗಿರುತ್ತದೆ.

**ಇತರೆ ಸವಲತ್ತುಗಳು:**

(1) ಎಳೆಯ ನೆಡುತೋಪುಗಳ ವಿನ: ಉಳಿದೆಡೆ ಗ್ರಾಮಸ್ಥರು ತಮ್ಮ ಜಾನುವಾರುಗಳಿಗೆ ನಿರ್ಬಂಧವಿಲ್ಲದೆ ಹುಲ್ಲು ಮೇಯಿಸಬಹುದು.

(2) ಎಳೆಯ ನೆಡುತೋಪುಗಳ ವಿನ: ಉಳಿದೆಡೆ ಗ್ರಾಮಸ್ಥರು ತಮ್ಮ ವಾಸ್ತವಿಕ ಉಪಯೋಗಕ್ಕಾಗಿ ಹಸಿರು ಎಲೆಗೊಬ್ಬರ, ಸೊಪ್ಪನ್ನು ಉಚಿತವಾಗಿ ಪಡೆಯಬಹುದು.

(3) ಗ್ರಾಮಸ್ಥರು ತಮ್ಮ ವಾಸ್ತವಿಕ ಉಪಯೋಗಕ್ಕಾಗಿ ಒಣ ಕಟ್ಟಿಗೆಗಳನ್ನು ಉಚಿತವಾಗಿ ಆಯ್ದುಕೊಳ್ಳಬಹುದಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ವಿ. ಜಯಲಕ್ಷ್ಮಿ**

ಪಿ.ಆರ್.956

ಸರ್ಕಾರದ ಅಧೀನ ಕಾರ್ಯದರ್ಶಿ,

ಅರಣ್ಯ, ಪರಿಸರ ಮತ್ತು ಜೀವಿಪರಿಸ್ಥಿತಿ ಶಾಸ್ತ್ರ ಇಲಾಖೆ.

## ಅಧಿಸೂಚನೆ

## ಸಂಖ್ಯೆ: ಅಪಜೀ 94 ಎಫ್‌ಎಎಫ್ 2005, ಬೆಂಗಳೂರು, ದಿನಾಂಕ:5ನೇ ಏಪ್ರಿಲ್, 2006

1963ನೇ ಕರ್ನಾಟಕ ಅರಣ್ಯ ಅಧಿನಿಯಮ (1964ನೇ ಕರ್ನಾಟಕ ಕಾಯ್ದೆ 5) 17ರಲ್ಲಿ ಪ್ರದತ್ತವಾಗಿರುವ ಅಧಿಕಾರದನ್ವಯ ಅಧಿಸೂಚನೆ ಸಂಖ್ಯೆ ಎಹೆಚ್‌ಎಫ್‌ಎಫ್ 822 ಎಫ್‌ಎಎಫ್ 91 ದಿನಾಂಕ: 16-9-1994ರ ಪ್ರಕಾರ ಈ ಕೆಳಗೆ ಅನುಸೂಚಿಯಲ್ಲಿ ನಮೂದಿಸಿರುವ ಜಮೀನುಗಳನ್ನು 05-04-2006 ದಿನಾಂಕದಿಂದ ಅನುಸೂಚಿಯ ಕೊನೆಯ ಭಾಗದಲ್ಲಿ ನಮೂದಿಸಿರುವ ಹಕ್ಕುಗಳ ಉಪಯೋಗಕ್ಕೆ ಒಳಪಟ್ಟು "ಮೀಸಲು ಅರಣ್ಯ" ಎಂದು ಘೋಷಿಸಿದೆ.

### ಅನುಸೂಚಿ

1. ಜಿಲ್ಲೆಯ ಹೆಸರು : ಚಿಕ್ಕಮಗಳೂರು
2. ತಾಲ್ಲೂಕಿನ ಹೆಸರು : ಕೊಪ್ಪ
3. ಹೋಬಳಿ ಹೆಸರು : ಕಸಬ
4. ಗ್ರಾಮದ ಹೆಸರು : ಹಿರೇಕೊಡಿಗೆ
5. ಪ್ರದೇಶದ ಸರ್ವೆ ನಂ. ವಿಸ್ತೀರ್ಣ (ಎ.ಗು)

| | |
|---|---|
| 121 | 41.29 |
| 101 | 90.30 |
| 102 | 3.10 |
| 151 | 47.00 |
| 98 | 362.22 |
| 99 | 104.06 |

**ಒಟ್ಟು 649.17 ಅಥವಾ 262.39 ಹೆಕ್ಟೇರ್ಸ್**

7. ಬ್ಲಾಕಿನ ಹೆಸರು : ಹಿರೇಕೊಡಿಗೆ ಬ್ಲಾಕ್-1

### ಗಡಿ ವಿವರಣೆ

**ಬ್ಲಾಕ್ :** 1 ಸರ್ವೆ ನಂ. 121, 101, 102, 151, 98, 99

**ವಿಸ್ತೀರ್ಣ:** 41.29,97.30, 3.10, 47.00, 362.22, 104.06.

ಭೂಮಾಪನ ರೇಖೆಯು ಸ್ಥಾನ ಸಂಖ್ಯೆ 153 ರಿಂದ ಪ್ರಾರಂಭವಾಗುತ್ತದೆ. ಇದು ಚಿಕ್ಕನೂರು ಗ್ರಾಮ ಗಡಿಯ ಮೇಲೆ ಹಿರೇಕೊಡಿಗೆ ಗ್ರಾಮದ ಸರ್ವೆ ನಂ. 101, 121ರ ಗಡಿಗಳು ಸಂದಿಸುವಲ್ಲಿರುವ ಹಾಗೂ ರಸ್ತೆ ಬದಿಯಲ್ಲಿರುವ ಕೂಡುಬಾಂದ್‌ನಿಂದ ನೈರುತ್ಯದ ಕಡೆಗೆ 101 ಮತ್ತು 121ರ ಸಾಮಾನ್ಯ ಗಡಿಯ ಮೇಲೆ 2 ಸರಪಳಿ ದೂರದಲ್ಲಿ ಸ್ಥಿರವಾಗಿದೆ. ಇಲ್ಲಿಂದ ರೇಖೆಯು ಈಶಾನ್ಯಾದ ಕಡೆಗೆ ಸರ್ವೆ ನಂ. 121ರಲ್ಲಿ ಹಾಗೂ ಚಿಕ್ಕನೂರು ಗಡಿಯ ಮೇಲೆ ಮಧ್ಯದ ಸ್ಥಾನ ಸಂಖ್ಯೆ 154 ರಿಂದ 29 ರ ಮೂಲಕ ಹಲವಾರು ದಿಕ್ಕುಗಳಲ್ಲಿ 179.20 ಸರಪಳಿ ದೂರ ಕ್ರಮಿಸಿ ಸ್ಥಾನ ಸಂಖ್ಯೆ 30ನ್ನು ಸೇರುತ್ತದೆ. ನಂತರ ರೇಖೆಯು ಸ್ಥಾನ ಸಂಖ್ಯೆ 30 ರಿಂದ ಸರ್ವೆ ನಂ. 121 ಹಾಗೂ 99 ಮತ್ತು 151 ರಲ್ಲಿ ಪಶ್ಚಿಮ, ದಕ್ಷಿಣ, ಪೂರ್ವದ ಕಡೆಗೆ ಮಧ್ಯದ ಸ್ಥಾನ ಸಂಖ್ಯೆ 31 ರಿಂದ 70 ಮೂಲಕ ಹಲವಾರು ದಿಕ್ಕುಗಳಲ್ಲಿ 263.70 ಸರಪಳಿ ದೂರ ಕ್ರಮಿಸಿ ಹಳ್ಳದ ಪಕ್ಕದಲ್ಲಿರುವ ಸ್ಥಾನ ಸಂಖ್ಯೆ 71ನ್ನು ಸೇರುತ್ತದೆ.

ಸ್ಥಾನ ಸಂಖ್ಯೆಯಿಂದ ಸ್ಥಾನ ಸಂಖ್ಯೆಗೆ ಇರುವ ಬೇರಿಂಗ್ ಮತ್ತು ದೂರ ಈ ಕೆಳಗಿನಂತಿದೆ.

ಸ್ಥಾನ ಸಂಖ್ಯೆಯಿಂದ ಸ್ಥಾನ ಸಂಖ್ಯೆಗೆ ಫೋರ್‌ಬೇರಿಂಗ್ (ಡಿಗ್ರಿಗಳಲ್ಲಿ) ದೂರು (ಸರಪಳಿಗಳಲ್ಲಿ $66^0$)

| | | | |
|---|---|---|---|
| 153 | 154 | 105 | 4.50 |
| 154 | 154ಎ | 47 | 1.00 |
| 154ಎ | 154ಬಿ | 154 | 1.00 |
| 154ಬಿ | 154ಸಿ | 65 | 3.00 |
| 154ಸಿ | 155 | 335 | 2.50 |

| ಸ್ಥಾನ ಸಂಖ್ಯೆಯಿಂದ | ಸ್ಥಾನ ಸಂಖ್ಯೆಗೆ | ಫೋರ್‌ಬೇರಿಂಗ್ (ಡಿಗ್ರಿಗಳಲ್ಲಿ) | ದೂರು (ಸರಪಳಿಗಳಲ್ಲಿ $66^{0}$) |
|---|---|---|---|
| 155 | 156 | 36 | 3.25 |
| 156 | 1 | 67 | 10.75 |
| 1 | 2 | 157 | 3.50 |
| 2 | 2ಎ | 71 | 2.00 |
| 2ಎ | 2ಬಿ | 160 | 3.00 |
| 2ಬಿ | 2ಸಿ | 64 | 2.00 |
| 2ಸಿ | 2ಡಿ | 345 | 3.10 |
| 2ಡಿ | 3 | 252 | 0.75 |
| 3 | 4 | 344 | 2.00 |
| 4 | 5 | 89 | 4.00 |
| 5 | 6 | 158 | 5.00 |
| 6 | 7 | 187 | 7.50 |
| 7 | 8 | 229 | 4.00 |
| 8 | 9 | 342 | 4.70 |
| 9 | 9ಎ | 335 | 7.00 |
| 9ಎ | 10 | 243 | 2.50 |
| 10 | 11 | 305 | 0.90 |
| 11 | 12 | 229 | 4.50 |
| 12 | 13 | 303 | 2.50 |
| 13 | 13ಎ | 33 | 1.50 |
| 13ಎ | 13ಬಿ | 322 | 2.25 |
| 13ಬಿ | 13ಸಿ | 286 | 2.50 |
| 13ಸಿ | 13ಡಿ | 225 | 2.50 |
| 13ಡಿ | 13ಇ | 143 | 4.00 |
| 13ಇ | 13ಎಫ್ | 100 | 2.00 |
| 13ಎಫ್ | 14 | 219 | 1.90 |
| 14 | 15 | 168 | 7.00 |
| 15 | 16 | 270 | 3.00 |
| 16 | 17 | 236 | 3.50 |
| 17 | 18 | 200 | 3.00 |
| 18 | 19 | 89.30 | 6.00 |
| 19 | 20 | 171 | 3.00 |
| 20 | 21 | 113 | 3.30 |
| 21 | 22 | 145 | 3.20 |
| 22 | 23 | 133 | 14.50 |
| 23 | 24 | 142 | 7.00 |
| 24 | 25 | 107 | 2.50 |
| 25 | 26 | 201 | 2.40 |
| 26 | 27 | 255 | 6.00 |
| 27 | 28 | 295 | 4.20 |
| 28 | 29 | 243 | 3.00 |
| 29 | 30 | 340 | 3.50 |
| 30 | 31 | 288 | 7.00 |
| 31 | 32 | 356 | 2.50 |
| 32 | 33 | 8 | 2.00 |
| 33 | 34 | 305 | 6.00 |
| 34 | 35 | 220 | 4.30 |
| 35 | 36 | 305.30 | 3.50 |
| 36 | 37 | 354 | 4.50 |
| 37 | 38 | 339.30 | 7.00 |
| 38 | 39 | 239 | 11.00 |
| 39 | 40 | 171 | 6.00 |

ಸ್ಥಾನ ಸಂಖ್ಯೆಯಿಂದ ಸ್ಥಾನ ಸಂಖ್ಯೆಗೆ ಫೋರ್‌ಬೇರಿಂಗ್ (ಡಿಗ್ರಿಗಳಲ್ಲಿ) ದೂರು (ಸರಪಳಿಗಳಲ್ಲಿ $66^0$)

| | | | |
|---|---|---|---|
| 40 | 41 | 163 | 4.00 |
| 41 | 42 | 244 | 5.00 |
| 42 | 43 | 175 | 4.70 |
| 43 | 44 | 88.30 | 4.00 |
| 44 | 45 | 174 | 5.50 |
| 45 | 46 | 134 | 1.50 |
| 46 | 47 | 92.30 | 6.20 |
| 47 | 48 | 112 | 5.50 |
| 48 | 49 | 136 | 4.50 |
| 49 | 50 | 90 | 6.50 |
| 50 | 51 | 100 | 5.70 |
| 51 | 52 | 194 | 4.50 |
| 52 | 53 | 274.30 | 7.00 |
| 53 | 54 | 204 | 2.70 |
| 54 | 55 | 192 | 7.00 |
| 55 | 56 | 70 | 8.20 |
| 56 | 57 | 82 | 5.40 |
| 57 | 58 | 112 | 8.00 |
| 58 | 59 | 137 | 4.50 |
| 59 | 60 | 161 | 1.50 |
| 60 | 60ಎ | 202 | 4.50 |
| 60ಎ | 60ಬಿ | 215 | 5.00 |
| 60ಬಿ | 60ಸಿ | 126 | 2.00 |
| 60ಸಿ | 60ಡಿ | 37 | 5.00 |
| 60ಡಿ | 61 | 23 | 5.00 |
| 61 | 62 | 202 | 5.00 |
| 62 | 62ಎ | 179 | 10.00 |
| 62ಎ | 62ಬಿ | 68.30 | 9.50 |
| 62ಬಿ | 63 | 32 | 2.30 |
| 63 | 64 | 71 | 4.00 |
| 64 | 65 | 20 | 5.00 |
| 65 | 66 | 10 | 27.00 |
| 66 | 67 | 137 | 2.00 |
| 67 | 68 | 58 | 3.00 |
| 68 | 69 | 134 | 11.00 |
| 69 | 70 | 105 | 8.20 |
| 70 | 71 | 59 | 3.00 |

**ಪೂರ್ವ :–**

ರೇಖೆಯು ಸ್ಥಾನ ಸಂಖ್ಯೆ 71 ರಿಂದ ಆಗ್ನೇಯಕ್ಕೆ ತಿರುಗಿ ಸರ್ವೆ ನಂ.151ರ ಮೂಲಕ 6.40 ಸರಪಳಿ ದೂರ ಕ್ರಮಿಸಿ ಮಧ್ಯದ ಸ್ಥಾನ ಸಂಖ್ಯೆ 72ನ್ನು ಹಾದು ಸ್ಥಾನ ಸಂಖ್ಯೆ 73 ನ್ನು ಸೇರುತ್ತದೆ. ನಂತರ ರೇಖೆಯು ದಕ್ಷಣಕ್ಕೆ ತಿರುಗಿ ಸರ್ವೆ ನಂ. 151ರ ಮೂಲಕ 27.20 ಸರಪಳಿ ದೂರ ಕ್ರಮಿಸಿ ಮಧ್ಯದ ಸ್ಥಾನ ಸಂಖ್ಯೆ 74 ರಿಂದ 76 ನ್ನು ಹಾದು ಸ್ಥಾನ ಸಂಖ್ಯೆ 77 ನ್ನು ಸೇರುತ್ತದೆ. ಅಲ್ಲಿಂದ ರೇಖೆಯು ಪಶ್ಚಿಮಕ್ಕೆ ತಿರುಗಿ ಸರ್ವೆ ನಂ. 98ರ ಮೂಲಕ 13.00 ಸರಪಳಿ ದೂರ ಕ್ರಮಿಸಿ ಸ್ಥಾನ ಸಂಖ್ಯೆ 78 ನ್ನು ಸೇರುತ್ತದೆ. ನಂತರ ರೇಖೆಯು ಆಗ್ನೇಯಕ್ಕೆ ಮತ್ತು ನೈರುತ್ಯಕ್ಕೆ 17.00 ಸರಪಳಿ ದೂರ ಕ್ರಮಿಸಿ ಮಧ್ಯದ ಸಂಖ್ಯೆ 79 ನ್ನು ಹಾದು ಸ್ಥಾನ ಸಂಖ್ಯೆ 80ನ್ನು ಸೇರುತ್ತದೆ. ನಂತರ ರೇಖೆಯು ವಿವಿಧ ದಿಕ್ಕುಗಳಲ್ಲಿ ಸರ್ವೆ ನಂ. 65 ಮತ್ತು 89 ರ ಸಾಮಾನ್ಯ ಸರಹದ್ದಿನ ಮೇಲೆ 28.70 ಸರಪಳಿ ದೂರ ಕ್ರಮಿಸಿ ಮಧ್ಯದ 81 ರಿಂದ 81 ನ್ನು ಹಾದು ಸ್ಥಾನ ಸಂಖ್ಯೆ 85ನ್ನು ಸೇರುತ್ತದೆ. ಅಲ್ಲಿಂದ ರೇಖೆಯು ವಿವಿಧ ದಿಕ್ಕುಗಳಲ್ಲಿ ಸ.ನಂ. 98ರ ಪೂರ್ವ ಎಲ್ಲೆಯ ಮೇಲೆ 27.50 ಸರಪಳಿ ದೂರ ಕ್ರಮಿಸಿ ಮಧ್ಯದ ಸಂಖ್ಯೆ 86 ರಿಂದ 91 ನ್ನು ಹಾದು ಸ್ಥಾನ ಸಂಖ್ಯೆ 92 ನ್ನು ಸೇರುತ್ತದೆ. ನಂತರ ರೇಖೆಯು ಸ್ಥಾನ ಸಂಖ್ಯೆ 92 ರಿಂದ ದಕ್ಷಣದ ಕಡೆಗೆ ಸರ್ವೆ ನಂ. 98 ರಲ್ಲಿ ಹಾಗೂ ಕುಂಬಾರಕೊಪ್ಪ ಗಡಿಯ ಮೇಲೆ ಮಧ್ಯದ ಸ್ಥಾನ ಸಂಖ್ಯೆ 93 ರಿಂದ 110ರ ಮೂಲಕ 90.95 ಸರಪಳಿ ದೂರ ಕ್ರಮಿಸಿ ಸ್ಥಾನ ಸಂಖ್ಯೆ 111ನ್ನು ಸೇರುತ್ತದೆ.
ಸ್ಥಾನ ಸಂಖ್ಯೆಯಿಂದ ಸ್ಥಾನಸಂಖ್ಯೆಗೆ ಇರುವ ದೂರ ಮತ್ತು ಬೇರಿಂಗ್ ಕೆಳಗಿನಂತಿದೆ.

ಸ್ಥಾನ ಸಂಖ್ಯೆಯಿಂದ ಸ್ಥಾನ ಸಂಖ್ಯೆಗೆ ಫೋರ್ ಬೇರಿಂಗ್ (ಡಿಗ್ರಿಗಳಲ್ಲಿ) ದೂರ (ಸರಪಳಿಗಳಲ್ಲಿ)

| | | | |
|---|---|---|---|
| 71 | 72 | 148 | 3.70 |
| 72 | 73 | 117 | 2.70 |
| 73 | 74 | 184 | 12.20 |

| ಸ್ಥಾನ ಸಂಖ್ಯೆಯಿಂದ | ಸ್ಥಾನ ಸಂಖ್ಯೆಗೆ | ಫೋರ್ ಬೇರಿಂಗ್ (ಡಿಗ್ರಿಗಳಲ್ಲಿ) | ದೂರ (ಸರಪಳಿಗಳಲ್ಲಿ) |
|---|---|---|---|
| 74 | 75 | 170 | 4.50 |
| 75 | 76 | 202 | 6.50 |
| 76 | 77 | 165 | 4.00 |
| 77 | 78 | 276 | 13.00 |
| 78 | 79 | 156 | 12.00 |
| 79 | 80 | 235 | 5.00 |
| 80 | 81 | 282 | 6.00 |
| 81 | 82 | 185 | 6.00 |
| 82 | 83 | 137 | 5.70 |
| 83 | 84 | 188 | 4.50 |
| 84 | 85 | 96 | 6.50 |
| 85 | 86 | 155 | 3.50 |
| 86 | 87 | 193 | 2.00 |
| 87 | 88 | 165 | 7.20 |
| 88 | 89 | 195 | 3.20 |
| 89 | 90 | 250 | 4.20 |
| 90 | 91 | 143 | 4.20 |
| 91 | 92 | 116 | 3.20 |
| 92 | 93 | 75 | 3.60 |
| 93 | 94 | 186 | 4.50 |
| 94 | 95 | 215 | 3.00 |
| 95 | 96 | 197 | 5.00 |
| 96 | 97 | 305 | 3.00 |
| 97 | 98 | 227 | 9.30 |
| 98 | 99 | 270 | 4.00 |
| 99 | 100 | 197 | 3.60 |
| 100 | 101 | 173 | 7.75 |
| 101 | 102 | 109 | 4.50 |
| 102 | 103 | 123 | 6.00 |
| 103 | 104 | 200 | 2.80 |
| 104 | 105 | 204 | 4.70 |
| 105 | 106 | 45 | 5.50 |
| 106 | 107 | 212 | 3.00 |
| 107 | 108 | 220 | 5.30 |
| 108 | 109 | 217.30 | 4.00 |
| 109 | 110 | 211.30 | 6.40 |
| 110 | 111 | 180 | 5.00 |

**ದಕ್ಷಿಣ :–**

ರೇಖೆಯು ಸ್ಥಾನ ಸಂಖ್ಯೆ 111ರಿಂದ ನೈರುತ್ಯದ ಮತ್ತು ವಾಯುವ್ಯದ ಕಡೆಗೆ ಹಿರೇಕೊಡಿಗೆ ಗ್ರಾಮ ಹಾಗೂ ಕಗ್ಗಾ ಗ್ರಾಮ ಗಡಿಯ ಮೇಲೆ ಮಧ್ಯದ ಸ್ಥಾನ ಸಂಖ್ಯೆ 112ರ ಮೂಲಕ 20.50 ಸರಪಳಿ ದೂರ ಕ್ರಮಿಸಿ ಸ್ಥಾನ ಸಂಖ್ಯೆ 113 ನ್ನು ಸೇರುತ್ತದೆ. ನಂತರ ರೇಖೆಯು ಸ್ಥಾನ ಸಂಖ್ಯೆ 113 ರಿಂದ ಹಿರೇಕೊಡಿಗೆ ಗ್ರಾಮದ ಸರ್ವೆ ನಂ. 98 ರಲ್ಲಿ ಮಧ್ಯದ ಸ್ಥಾನ ಸಂಖ್ಯೆ 113 ಎ ಯಿಂದ 116ರ ಮೂಲಕ 29.00 ಸರಪಳಿ ದೂರ ಕ್ರಮಿಸಿ ಸ್ಥಾನ ಸಂಖ್ಯೆ 117ನ್ನು ಸೇರುತ್ತದೆ. ಪುನ: ರೇಖೆಯು ಉತ್ತರಕ್ಕೆ ಸರ್ವೆ ನಂ. 214ರ ಪೂರ್ವ ಎಲ್ಲೆಯ ಮೇಲೆ 17 ಸರಪಳಿ ದೂರ ಕ್ರಮಿಸಿ ಸ್ಥಾನ ಸಂಖ್ಯೆ 118 ನ್ನು ಸೇರುತ್ತದೆ. ನಂತರ ರೇಖೆಯು ಸ್ಥಾನ ಸಂಖ್ಯೆ 118 ರಿಂದ ಸರ್ವೆ ನಂ. 98 ರಲ್ಲಿ ಉತ್ತರ ಹಾಗೂ ಪಶ್ಚಿಮದ ಕಡೆಯಲ್ಲಿ ಮಧ್ಯದ ಸ್ಥಾನ ಸಂಖ್ಯೆ 119 ರಿಂದ 134ರ ಮೂಲಕ 87.45 ಸರಪಳಿ ದೂರ ಕ್ರಮಿಸಿ ಬೊಮ್ಮಲಾಪುರ ಗ್ರಾಮಗಡಿಯಲ್ಲಿರುವ ಸ್ಥಾನ ಸಂಖ್ಯೆ 135 ನ್ನು ಸೇರುತ್ತದೆ.

ಸ್ಥಾನ ಸಂಖ್ಯೆಯಿಂದ ಸ್ಥಾನ ಸಂಖ್ಯೆಗೆ ಇರುವ ದೂರ ಮತ್ತು ಬೇರಿಂಗ್ ಕೆಳಗಿನಂತಿದೆ.

| ಸ್ಥಾನ ಸಂಖ್ಯೆಯಿಂದ | ಸ್ಥಾನ ಸಂಖ್ಯೆಗೆ | ಫೋರ್ ಬೇರಿಂಗ್ (ಡಿಗ್ರಿಗಳಲ್ಲಿ) | ದೂರ (ಸರಪಳಿಗಳಲ್ಲಿ) |
|---|---|---|---|
| 111 | 112 | 246 | 16.00 |
| 112 | 113 | 310 | 4.50 |
| 113 | 113ಎ | 345 | 11.00 |
| 113ಎ | 113ಬಿ | 277 | 2.50 |
| 113ಬಿ | 114 | 215 | 2.50 |
| 114 | 115 | 12 | 4.00 |

| ಸ್ಥಾನ ಸಂಖ್ಯೆಯಿಂದ | ಸ್ಥಾನ ಸಂಖ್ಯೆಗೆ | ಫೋರ್ ಬೇರಿಂಗ್ (ಡಿಗ್ರಿಗಳಲ್ಲಿ) | ದೂರ (ಸರಪಳಿಗಳಲ್ಲಿ) |
|---|---|---|---|
| 115 | 116 | 90 | 3.00 |
| 116 | 117 | 99 | 6.00 |
| 117 | 118 | 15 | 17.00 |
| 118 | 119 | 319 | 4.70 |
| 119 | 120 | 42 | 5.25 |
| 120 | 121 | 93 | 7.50 |
| 121 | 122 | 1 | 6.00 |
| 122 | 123 | 273 | 6.00 |
| 123 | 124 | 290 | 2.25 |
| 124 | 125 | 207 | 4.90 |
| 125 | 126 | 300 | 6.00 |
| 126 | 127 | 360 | 5.75 |
| 127 | 128 | 280 | 2.75 |
| 128 | 129 | 203 | 15.00 |
| 129 | 130 | 276 | 2.10 |
| 130 | 131 | 189 | 6.75 |
| 131 | 132 | 197 | 4.00 |
| 132 | 133 | 150 | 4.00 |
| 133 | 134 | 189 | 4.00 |
| 134 | 135 | 204 | 2.50 |

**ಪಶ್ಚಿಮ :-**

ರೇಖೆಯು ಸ್ಥಾನ ಸಂಖ್ಯೆ 135 ರಿಂದ ವಾಯುವ್ಯ ದಿಕ್ಕಿನ ಕಡೆಗೆ ಬೊಮ್ಮಲಾಪುರ ಮತ್ತು ಹಿರೇಕೊಡಿಗೆ ಗ್ರಾಮದ ಸರ್ವೆ ನಂ. 98ರ ಸಾಮಾನ್ಯ ಸರಹದ್ದಿನ ಮೇಲೆ 46 ಸರಪಳಿ ದೂರ ಕ್ರಮಿಸಿ ಮಧ್ಯದ ಸ್ಥಾನ ಸಂಖ್ಯೆ 136 ನ್ನು ಹಾದು ಸ್ಥಾನ ಸಂಖ್ಯೆ 137 ನ್ನು ಸೇರುತ್ತದೆ. ಅಲ್ಲಿಂದ ರೇಖೆಯು ಈಶಾನ್ಯಕ್ಕೆ ತಿರುಗಿ ಸರ್ವೆ ನಂ. 98 ಮತ್ತು ಬೋಳಾಪುರ ಗ್ರಾಮದ ಸಾಮಾನ್ಯ ಸರಹದ್ದಿನ ಮೇಲೆ 72.50 ಸರಪಳಿ ದೂರ ಕ್ರಮಿಸಿ ಮಧ್ಯದ ಸ್ಥಾನ ಸಂಖ್ಯೆ 138 ರಿಂದ 140 ನ್ನು ಹಾದು ಸ್ಥಾನ ಸಂಖ್ಯೆ 141 ನ್ನು ಸೇರುತ್ತದೆ. ನಂತರ ರೇಖೆಯು ವಿವಿಧ ದಿಕ್ಕುಗಳಲ್ಲಿ ಹಿರೇಕೊಡಿಗೆ ಗ್ರಾಮದ ಸರ್ವೆ ನಂ. 99 ಮತ್ತು ಬೋಳಾಪುರ ಗ್ರಾಮದ ಸಾಮಾನ್ಯ ಸರಹದ್ದನ ಮೇಲೆ 219.7 ಸರಪಳಿ ದೂರ ಕ್ರಮಿಸಿ ಮಧ್ಯದ ಸಂಖ್ಯೆ 142 ರಿಂದ 152 ರ ಮೂಲಕ ಪ್ರಾರಂಭದ ಸ್ಥಾನ ಸಂಖ್ಯೆ 153 ನ್ನು ಸೇರುತ್ತದೆ.

ಸ್ಥಾನ ಸಂಖ್ಯೆಯಿಂದ ಸ್ಥಾನ ಸಂಖ್ಯೆಗೆ ಇರುವ ಬೇರಿಂಗ್ ಮತ್ತು ದೂರ ಈ ಕೆಳಕಂಡಂತೆ ಇರುತ್ತದೆ.

| ಸ್ಥಾನ ಸಂಖ್ಯೆಯಿಂದ | ಸ್ಥಾನ ಸಂಖ್ಯೆಗೆ | ಫೋರ್ ಬೇರಿಂಗ್ (ಡಿಗ್ರಿಗಳಲ್ಲಿ) | ದೂರ (ಸರಪಳಿಗಳಲ್ಲಿ) |
|---|---|---|---|
| 135 | 136 | 345 | 2.00 |
| 136 | 137 | 340 | 14.00 |
| 137 | 138 | 26 | 16.50 |
| 138 | 139 | 13 | 17.00 |
| 139 | 140 | 28 | 26.00 |
| 140 | 141 | 6 | 13.00 |
| 141 | 142 | 320 | 15.00 |
| 142 | 143 | 305 | 11.00 |
| 143 | 144 | 228 | 10.00 |
| 144 | 145 | 305 | 15.50 |
| 145 | 146 | 7 | 10.00 |
| 146 | 147 | 53 | 5.00 |
| 147 | 147ಎ | 180 | 2.50 |
| 147ಎ | 147ಬಿ | 90 | 2.00 |
| 147ಬಿ | 147ಸಿ | 172 | 2.15 |
| 147ಸಿ | 147ಡಿ | 81 | 3.10 |
| 147ಡಿ | 147ಇ | 4 | 1.50 |
| 147ಇ | 147ಎಫ್ | 276 | 2.00 |
| 147ಎಫ್ | 148 | 180 | 4.10 |
| 148 | 148ಎ | 31 | 3.50 |
| 148ಎ | 148ಬಿ | 116 | 3.10 |
| 148ಬಿ | 148ಸಿ | 28 | 2.25 |
| 148ಸಿ | 149 | 297 | 3.50 |
| 149 | 150 | 9 | 2.00 |

| ಸ್ಥಾನ ಸಂಖ್ಯೆಯಿಂದ | ಸ್ಥಾನ ಸಂಖ್ಯೆಗೆ | ಫೋರ್ ಬೇರಿಂಗ್ (ಡಿಗ್ರಿಗಳಲ್ಲಿ) | ದೂರ (ಸರಪಳಿಗಳಲ್ಲಿ) |
|---|---|---|---|
| 150 | 150ಎ | 33 | 3.00 |
| 150ಎ | 150ಬಿ | 123 | 1.75 |
| 150ಬಿ | 150ಸಿ | 32 | 1.50 |
| 150ಸಿ | 151 | 317 | 2.00 |
| 151 | 151ಎ | 32 | 8.00 |
| 151ಎ | 151ಬಿ | 318 | 1.25 |
| 151ಬಿ | 151ಸಿ | 33 | 5.50 |
| 151ಸಿ | 152 | 115 | 1.00 |
| 152 | 153 | 30 | 9.00 |

**ಬ್ಲಾಕ್–2**

**ಸರ್ವೆ ನಂ :– 101 ವಿಸ್ತೀರ್ಣ 3.20 ಎ.ಗುಂ**

**ಉತ್ತರ :–**

ರೇಖೆಯು ಸ್ಥಾನ ಸಂಖ್ಯೆ 1 ರಿಂದ ಪ್ರಾರಂಭವಾಗುತ್ತದೆ. ಇದು ಚಿಕ್ಕನೂರು ಹಿರೇಕೊಡಿಗೆ ಮತ್ತು ಬುಳ್ಳಾಪುರ ಗ್ರಾಮ ಸಂಧಿಸುವಲ್ಲಿರುವ ಕೂಡುಬಾಂದ್‌ನಲ್ಲಿ ಸ್ಥಿರವಾಗಿದೆ. ಇಲ್ಲಿಂದ ರೇಖೆಯು ಚಿಕ್ಕನೂರು ಗ್ರಾಮ ಗಡಿಯಲ್ಲಿ ಪೂರ್ವದ ಕಡೆಗೆ ಚಲಿಸಿ 16.75 ಸರಪಳಿ ದೂರ ಕ್ರಮಿಸಿ ಸ್ಥಾನ ಸಂಖ್ಯೆ 2 ನ್ನು ಸೇರುತ್ತದೆ.

ಸ್ಥಾನ ಸಂಖ್ಯೆಯಿಂದ ಸ್ಥಾನ ಸಂಖ್ಯೆಗೆ ಇರುವ ಬೇರಿಂಗ್ ಮತ್ತು ದೂರ ಕೆಳಗಿನಂತಿದೆ.

| ಸ್ಥಾನ ಸಂಖ್ಯೆಯಿಂದ | ಸ್ಥಾನ ಸಂಖ್ಯೆಗೆ | ಫೋರ್ ಬೇರಿಂಗ್ (ಡಿಗ್ರಿಗಳಲ್ಲಿ) | ದೂರ (ಸರಪಳಿಗಳಲ್ಲಿ) |
|---|---|---|---|
| 1 | 2 | 96 | 16.75 |

**ಪೂರ್ವ :–**

ರೇಖೆಯು ಸ್ಥಾನ ಸಂಖ್ಯೆ 2 ರಿಂದ ನೈರುತ್ಯದ ಕಡೆಗೆ ಸರ್ವೆ ನಂ. 101 ರಲ್ಲಿ 2 ಸರಪಳಿ ದೂರ ಕ್ರಮಿಸಿ ಸ್ಥಾನ ಸಂಖ್ಯೆ 3ನ್ನು ಸೇರುತ್ತದೆ.

ಸ್ಥಾನ ಸಂಖ್ಯೆಯಿಂದ ಸ್ಥಾನ ಸಂಖ್ಯೆಗೆ ಇರುವ ದೂರ ಈ ಕೆಳಕಂಡಂತೆ ಇರುತ್ತದೆ.

| ಸ್ಥಾನ ಸಂಖ್ಯೆಯಿಂದ | ಸ್ಥಾನ ಸಂಖ್ಯೆಗೆ | ಫೋರ್ ಬೇರಿಂಗ್ (ಡಿಗ್ರಿಗಳಲ್ಲಿ) | ದೂರ (ಸರಪಳಿಗಳಲ್ಲಿ) |
|---|---|---|---|
| 2 | 3 | 205 | 2 |

**ದಕ್ಷಿಣ :–**

ರೇಖೆಯು ಸ್ಥಾನ ಸಂಖ್ಯೆ 3 ರಿಂದ ಪಶ್ಚಿಮದ ಕಡೆಗೆ ಸರ್ವೆ ನಂ. 101 ರಲ್ಲಿ ಮಧ್ಯದ ಸ್ಥಾನ ಸಂಖ್ಯೆ 4 ರ ಮೂಲಕ 13.00 ಸರಪಳಿ ದೂರ ಕ್ರಮಿಸಿ ಬುಳ್ಳಾಪುರ ಗಡಿಯಲ್ಲಿರುವ ಸ್ಥಾನ ಸಂಖ್ಯೆ 5 ನ್ನು ಸೇರುತ್ತದೆ.

ಸ್ಥಾನ ಸಂಖ್ಯೆಯಿಂದ ಸ್ಥಾನ ಸಂಖ್ಯೆಗೆ ಇರುವ ದೂರ ಮತ್ತು ಬೇರಿಂಗ್ ಕೆಳಗಿನಂತಿದೆ.

| ಸ್ಥಾನ ಸಂಖ್ಯೆಯಿಂದ | ಸ್ಥಾನ ಸಂಖ್ಯೆಗೆ | ಫೋರ್ ಬೇರಿಂಗ್ (ಡಿಗ್ರಿಗಳಲ್ಲಿ) | ದೂರ (ಸರಪಳಿಗಳಲ್ಲಿ) |
|---|---|---|---|
| 3 | 4 | 293 | 4 |
| 4 | 5 | 252 | 9 |

**ಉತ್ತರ :–**

ರೇಖೆಯು ಸ್ಥಾನ ಸಂಖ್ಯೆ 5 ರಿಂದ ವಾಯುವ್ಯದ ಕಡೆಗೆ ಬುಳ್ಳಾಪುರ ಗಡಿಯ ಮೇಲೆ 15.00 ಸರಪಳಿ ದೂರ ಕ್ರಮಿಸಿ ಪ್ರಾರಂಭದ ಸ್ಥಾನ ಸಂಖ್ಯೆ 1 ನ್ನು ಸೇರುತ್ತದೆ.

ಸ್ಥಾನ ಸಂಖ್ಯೆಯಿಂದ ಸ್ಥಾನ ಸಂಖ್ಯೆಗೆ ಇರುವ ದೂರ ಮತ್ತು ಬೇರಿಂಗ್ ಕೆಳಗಿನಂತಿದೆ.

| ಸ್ಥಾನ ಸಂಖ್ಯೆಯಿಂದ | ಸ್ಥಾನ ಸಂಖ್ಯೆಗೆ | ಫೋರ್ ಬೇರಿಂಗ್ (ಡಿಗ್ರಿಗಳಲ್ಲಿ) | ದೂರ (ಸರಪಳಿಗಳಲ್ಲಿ) |
|---|---|---|---|
| 5 | 1 | 322 | 15.00 |

**ಆವರಣ–1 :–**

ಇದು ಬ್ಲಾಕ್–1ರಲ್ಲಿ 0.04 ಗುಂಟೆ ವಿಸ್ತೀರ್ಣ ಇದ್ದು ಸರ್ವೆ ನಂ. 99 ರಲ್ಲಿ ಮಧ್ಯ ಭಾಗದಲ್ಲಿ ಸ್ಥಾನ ಸಂಖ್ಯೆ 57ರ ಎದುರು ಭಾಗದಲ್ಲಿ ರಸ್ತೆಯ ಪಕ್ಕದಲ್ಲಿ ಸ್ಥಿರವಾಗಿದೆ.

**ಆವರಣ–2 :–**

ಇದು ಬ್ಲಾಕ್–1ರಲ್ಲಿ 0.20 ಗುಂಟೆ ವಿಸ್ತೀರ್ಣ ಇದ್ದು ಸರ್ವೆ ನಂ. 99 ರಲ್ಲಿ ಮಧ್ಯ ಭಾಗದಲ್ಲಿ ಸ್ಥಾನ ಸಂಖ್ಯೆ 58ರ ಎದುರು ಭಾಗದಲ್ಲಿ ಆವರಣ–1 ಹತ್ತಿರದಲ್ಲಿ ಮತ್ತು ರಸ್ತೆಗೆ ಹೊಂದಿಕೊಂಡಂತೆ ಸ್ಥಿರವಾಗಿದೆ.

**ಆವರಣ–3 :–**

ಇದು ಬ್ಲಾಕ್–1ರಲ್ಲಿ 0.10 ಗುಂಟೆ ವಿಸ್ತೀರ್ಣ ಇದ್ದು ಇದು ಸರ್ವೆ ನಂ.99 ರಲ್ಲಿ ಮಧ್ಯ ಭಾಗದಲ್ಲಿ ಸ್ಥಾನ ಸಂಖ್ಯೆ 59ರ ಎದುರು ಭಾಗದಲ್ಲಿ ಹಾಗೂ ಆವರಣ–3 ರ ಹತ್ತಿರ ಸ್ಥಿರವಾಗಿದೆ.

**ದಾರಿಯ ಹಕ್ಕುಗಳು**

(1) ರಸ್ತೆಯು ಗಣಪತಿ ಕಟ್ಟೆಯಲ್ಲಿರುವ ಬೋಳಾಪುರ–ಗಡಿಕಲ್ಲು ರಸ್ತೆಯಿಂದ ಪ್ರಾರಂಭಿ ಸರ್ವೆ ನಂ. 101 ಮತ್ತು 99 ರಲ್ಲಿ ಆಗ್ನೇಯದ ಕಡೆಗೆ ಚಲಿಸಿ ಎರಡು ಭಾಗವಾಗಿ ಒಂದು ಬೋಳಾಪುರಕ್ಕೆ ಹಾಗೂ ಇನ್ನೊಂದು ಮುಂದುವರೆದು ಸರ್ವೆ ನಂ. 99 ರಲ್ಲಿರುವ ಹಳ್ಳದಲ್ಲಿ ಕೊನೆಗೊಳ್ಳುತ್ತದೆ.

**ಇತರೆ ಸವಲತ್ತುಗಳು**

(1) ಎಳೆಯ ನೆಡುತೋಪುಗಳ ವಿನ: ಗ್ರಾಮಸ್ಥರು ತಮ್ಮ ಜಾನುವಾರುಗಳಿಗಿ ಹುಲ್ಲು ಮೇಯಿಸಬಹುದಾಗಿದೆ.

(2) ಎಳೆಯ ನೆಡುತೋಪುಗ ವಿನ: ಉಳಿದೆಡೆ ಗ್ರಾಮಸ್ಥರು ತಮ್ಮ ವಾಸ್ತವಿಕ ಉಪಯೋಗಕ್ಕಾಗಿ ಹಸಿರು ಎಲೆಗೊಬ್ಬರ ಸೊಪ್ಪನ್ನು ಮತ್ತು ಒಣಸೌದೆಯನ್ನು ಉಚಿತವಾಗಿ ಸಂಗ್ರಹಿಸಬಹುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ವಿ. ಜಯಲಕ್ಷ್ಮಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಅರಣ್ಯ, ಪರಿಸರ ಮತ್ತು ಜೀವಿಪರಿಸ್ಥಿತಿ ಶಾಸ್ತ್ರ ಇಲಾಖೆ.

ಪಿ.ಆರ್.957

## ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಸಚಿವಾಲಯ

## ಅಧಿಸೂಚನೆ

**ಸಂಖ್ಯೆ: ಸಂವ್ಯಶಾಇ 7 ರಾಶಾಪು 2004, ಬೆಂಗಳೂರು, ದಿನಾಂಕ: 17ನೇ ಏಪ್ರಿಲ್, 2006**

ಬೆಂಗಳೂರು ನೀರು ಸರಬರಾಜು ಮತ್ತು ಗ್ರಾಮಸಾರ ಚರಂಡಿ ವ್ಯವಸ್ಥೆ ಅಧಿನಿಯಮ, 1964ರ (1964ರ 36) ಅಧಿಕೃತ ಕನ್ನಡ ಭಾಷಾಂತರವನ್ನು ಕರ್ನಾಟಕ ಅಫಿಷಿಯಲ್ ಲಾಂಗ್ವೇಜ್ ಆಕ್ಟ್, 1963ರ ಪ್ರಕರಣ 5ಎ ಅಡಿಯಲ್ಲಿ ರಾಜ್ಯಪಾಲರ ಅಧಿಕಾರದ ಮೇರೆಗೆ ಸಾರ್ವಜನಿಕರ ಮಾಹಿತಿಗಾಗಿ ಕರ್ನಾಟಕ ರಾಜ್ಯಪತ್ರದಲ್ಲಿ ಮರು ಪ್ರಕಟಿಸಲು ಆದೇಶಿಸಲಾಗಿದೆ.

## ಕರ್ನಾಟಕ ನೀರಾವರಿ ಅಧಿನಿಯಮ, 1964

### ಪ್ರಕರಣಗಳ ಅನುಕ್ರಮಣಿಕೆ

**ಪ್ರಕರಣಗಳು:**

## ಅಧ್ಯಾಯ-IV

## ನೀರು ಸರಬರಾಜು

56. ನಳಿಕೆಗಳು, ಲೈನುಗಳು ಇತ್ಯಾದಿಗಳನ್ನು ಉಪಯೋಗಿಸುವವನ ಹಕ್ಕುಗಳು
57. ಇತರ ವ್ಯಕ್ತಿಗಳಿಗೆ ಸೇರಿದ ಭೂಮಿಯ ಮೂಲಕ ಕೊಳವೆಗಳನ್ನು ಹಾಕಲು ಆವರಣದ ಒಡೆಯನ ಅಧಿಕಾರ
58. ಹೊಣೆಗಾರನಾದ ವ್ಯಕ್ತಿಗೆ ನೋಟೀಸನ್ನು ಕೊಟ್ಟ ತರುವಾಯ ಕಾಮಗಾರಿಯನ್ನು ಕಾರ್ಯಗತಗೊಳಿಸಲು ಅಧಿಕಾರ
59. ಲೈಸೆನ್ಸು ಪಡೆದ ಕೊಳಾಯಿಗಾರನು ಮಾಡಬೇಕಾದ ಕಾಮಗಾರಿ
60. ಕೆಲವು ಕಾರ್ಯಗಳ ಬಗ್ಗೆ ನಿಷೇಧ
61. ನೀರು ಸರಬರಾಜಿಗೆ ಸಂಬಂಧಿಸಿದಂತೆ ವಿನಿಯಮಗಳು
61ಎ. ನೀರು ಸರಬರಾಜಿನ ಬಗ್ಗೆ ಉಪವಿಧಿಗಳು
62. ಕೆಲವು ಅಪರಾಧಗಳಿಗಾಗಿ ದಂಡನೆ

ಅಧ್ಯಾಯ-V

ಗ್ರಾಮಸಾರ ಚರಂಡಿ ಮತ್ತು ಗ್ರಾಮಸಾರ ಚರಂಡಿ ವ್ಯವಸ್ಥೆ

63. ಗ್ರಾಮಸಾರ ಚರಂಡಿ, ಇತ್ಯಾದಿಗಳು ಮಂಡಲಿಯಲ್ಲಿ ನಿಹಿತಗೊಳ್ಳುವುದು
64. ಗ್ರಾಮಸಾರ ಚರಂಡಿಗಳು ಮತ್ತು ಗ್ರಾಮಸಾರ ವಿಲೆ ಕಾಮಗಾರಿಗಳ ನಿಯಂತ್ರಣ
65. ಮಂಡಳಿಯ ಗ್ರಾಮಸಾರ ಚರಂಡಿಗಳೊಳಕ್ಕೆ ಕೆಲವು ವಸ್ತುಗಳನ್ನು ಬಿಡಬಾರದು
66. ಮಂಡಳಿಯ ಗ್ರಾಮಸಾರ ಚರಂಡಿಗೆ ಹರಿಸಲು ಒಡೆಯರು ಮತ್ತು ಅಧಿಭೋಗದಾರರಿಂದ ಅರ್ಜಿ
67. ಚರಂಡಿ ವ್ಯವಸ್ಥೆ ಇಲ್ಲದ ಆವರಣದ ಬಗ್ಗೆ ಚರಂಡಿ ವ್ಯವಸ್ಥೆ
68. ಹೊಸ ಆವರಣಗಳನ್ನು ಚರಂಡಿಗಳಿಲ್ಲದೆ ನಿರ್ಮಿಸತಕ್ಕುದಲ್ಲ
69. ಸಂಯೋಜಿತ ಕಾರ್ಯಾಚರಣೆ ಮೂಲಕ ಆವರಣಗಳ ಗುಂಪು ಅಥವಾ ಬ್ಲಾಕುಗಳಿಗೆ ಚರಂಡಿಯನ್ನು ಒದಗಿಸುವ ಅಧಿಕಾರ
70. ಕೆಲವು ಸಂದರ್ಭಗಳಲ್ಲಿ ಖಾಸಗಿ ಚರಂಡಿಗಳನ್ನು ಮುಚ್ಚಲು ಅಥವಾ ಅವುಗಳ ಉಪಯೋಗವನ್ನು ಸೀಮಿತಗೊಳಿಸಲು ಮಂಡಳಿಯ ಅಧಿಕಾರ
71. ಒಡೆಯನನ್ನು ಹೊರತುಪಡಿಸಿ ಯಾವನೇ ಇತರ ವ್ಯಕ್ತಿಯಿಂದ ಚರಂಡಿಯ ಉಪಯೋಗ
72. ಗ್ರಾಮಸಾರ ಚರಂಡಿ ವ್ಯವಸ್ಥೆ ಮತ್ತು ಮಳೆಯ ನೀರಿನ ಚರಂಡಿಗಳು ವಿಭಿನ್ನವಾಗಿರತಕ್ಕುದು
73. ತೃಪ್ತಿಕರವಾದ ಚರಂಡಿ ವ್ಯವಸ್ಥೆಗಾಗಿ ಕೆಲವು ಕಾಮಗಾರಿಗಳನ್ನು ಕಾರ್ಯಗತಗೊಳಿಸಲು ಒಡೆಯನನ್ನು ಅಗತ್ಯಪಡಿಸುವ ಅಧಿಕಾರ
74. ಗ್ರಾಮಸಾರ ಚರಂಡಿಗಳನ್ನು ಹರಿಸಲು ಮತ್ತು ಗ್ರಾಮಸಾರದ ವಿಲೆಗಾಗಿ ಸ್ಥಳಗಳನ್ನು ಗೊತ್ತುಪಡಿಸುವುದು
75. ಅನುಮತಿಯಿಲ್ಲದೆ ಗ್ರಾಮಸಾರ ಚರಂಡಿಗಳೊಂದಿಗೆ ಕೂಡಿಸತಕ್ಕುದಲ್ಲ
76. ಅನುಮತಿಯಿಲ್ಲದೆ ಗ್ರಾಮಸಾರ ಚರಂಡಿಗಳ ಮೇಲೆ ಕಟ್ಟಡಗಳು ಮತ್ತು ಖಾಸಗಿ ಬೀದಿಗಳನ್ನು ಕಟ್ಟತಕ್ಕುದಲ್ಲ ಅಥವಾ ನಿರ್ಮಿಸತಕ್ಕುದಲ್ಲ
77. ಗ್ರಾಮಸಾರ ಚರಂಡಿಗಳಿಗಾಗಿ ಸ್ವತ್ತಿನ ಉಪಯೋಗದ ಬಗ್ಗೆ ಹಕ್ಕುಗಳು
78. ಇತರ ವ್ಯಕ್ತಿಗಳಿಗೆ ಸೇರಿದ ಭೂಮಿಯ ಮೂಲಕ ಗ್ರಾಮಸಾರ ಚರಂಡಿಯನ್ನು ಹಾಕಲು ಆವರಣದ ಒಡೆಯನ ಅಧಿಕಾರ
79. ಹೊಣೆಗಾರನಾದ ವ್ಯಕ್ತಿಗೆ ನೋಟೀಸನ್ನು ಕೊಟ್ಟ ತರುವಾಯ ಕಾಮಗಾರಿಯನ್ನು ನಿರ್ವಹಿಸಲು ಅಧಿಕಾರ
80. ಗ್ರಾಮಸಾರ ಚರಂಡಿ ಅಥವಾ ರೊಚ್ಚುಗುಂಡಿಯ ವಾಯುಸಂಚಾರಕ್ಕೆ ಸುರಂಗ ಮಾರ್ಗಗಳು (ಶಾಫ್ಟ್‌ರ್‌ಗಳು) ಇತ್ಯಾದಿಗಳನ್ನು ಜೋಡಿಸುವ ಅಧಿಕಾರ
81. ದೋಷಯುಕ್ತವಾಗಿರುವುದಾಗಿ ನಂಬಲಾದ ಗ್ರಾಮಸಾರ ಚರಂಡಿಗಳು, ಇತ್ಯಾದಿಗಳನ್ನು ಪರಿಶೀಲಿಸಲು ಮತ್ತು ಪರೀಕ್ಷಿಸಲು ಅಧಿಕಾರ
82. ಲೈಸೆನ್ಸು ಪಡೆದ ಕೊಳಾಯಿಗಾರನು ಕಾಮಗಾರಿಯನ್ನು ಮಾಡತಕ್ಕುದು
83. ಕೆಲವು ಕಾರ್ಯಗಳ ಬಗ್ಗೆ ನಿಷೇಧ
84. ಗ್ರಾಮಸಾರ ಚರಂಡಿ ವ್ಯವಸ್ಥೆ ಬಗ್ಗೆ ವಿನಿಯಮಗಳು
84ಎ. ಗ್ರಾಮಸಾರ ಚರಂಡಿ ವ್ಯವಸ್ಥೆ ಬಗೆಗಿನ ಉಪವಿಧಿಗಳು
85. ಕೆಲವು ಅಪರಾಧಗಳಿಗಾಗಿ ದಂಡನೆ

## ಅಧ್ಯಾಯ-VI

### ಸಂಕೀರ್ಣ

86. ವಾರ್ಷಿಕ ವರದಿಗಳು, ಅಂಕಿ ಅಂಶಗಳು ಮತ್ತು ವಿವರ ಪಟ್ಟಿಕೆಗಳು
87. ನಿಯಮ ರಚನಾಧಿಕಾರ
88. ವಿನಿಯಮಗಳು
89. ರಾಜ್ಯ ಸರ್ಕಾರದಿಂದ ನಿರ್ದೇಶನಗಳು
90. ಲೈಸೆನ್ಸುಗಳು ಮತ್ತು ಬರಹದಲ್ಲಿನ ಅನುಮತಿಗಳು
91. ಪ್ರವೇಶ ಮತ್ತು ಪರಿಶೀಲನೆಯ ಅಧಿಕಾರಗಳು
92. ಯಾವುದೇ ಕಾಮಗಾರಿಗೆ ಸಂಬಂಧಪಟ್ಟಂತೆ ಭೂಮಿಗೆ ಲಗತ್ತಾಗಿರುವ ಭೂಮಿಯನ್ನು ಪ್ರವೇಶಿಸಲು ಅಧಿಕಾರ
93. ಕಟ್ಟಡಗಳೊಳಕ್ಕೆ ಬಲಾತ್ಕಾರ ಪ್ರವೇಶ
94. ಪ್ರವೇಶಿಸುವ ಕಾಲ
95. ಸಾಮಾನ್ಯವಾಗಿ ಸಮ್ಮತಿಯನ್ನು ಪಡೆದುಕೊಳ್ಳತಕ್ಕುದು
96. ಸಾಮಾಜಿಕ ಅಥವಾ ಧಾರ್ಮಿಕ ಆಚರಣೆಗಳ ಬಗ್ಗೆ ಯುಕ್ತ ಗೌರವವನ್ನು ಹೊಂದಿರತಕ್ಕುದು
97. ಕಾಮಗಾರಿಗಳನ್ನು ನಿರ್ವಹಿಸುವಲ್ಲಿ ನಿಷೇಧ ಅಥವಾ ಅಡ್ಡಿ ಅಥವಾ ಪೀಡಿಸುವಿಕೆ
98. ನೋಟೀಸು, ಇತ್ಯಾದಿಗಳು ಯುಕ್ತ ಕಾಲವನ್ನು ನಿಗದಿಪಡಿಸತಕ್ಕುದು
99. ನೋಟೀಸುಗಳು, ಇತ್ಯಾದಿಗಳ ಮೇಲಿನ ರುಜುವಿನ ಬಗ್ಗೆ ಮುದ್ರೆಯನ್ನು ಹಾಕಬಹುದು
100. ನೋಟೀಸುಗಳು, ಇತ್ಯಾದಿಗಳನ್ನು ಯಾರು ಜಾರಿಗೊಳಿಸಬೇಕು ಅಥವಾ ಕೊಡಬೇಕು ಎಂಬ ಬಗ್ಗೆ
101. ನೋಟೀಸುಗಳು, ಇತ್ಯಾದಿಗಳ ಜಾರಿ
102. ಚಾರ್ಜುಗಳಿಗಾಗಿ ಬಿಲ್ಲುಗಳು ಅಥವಾ ತಗಾದೆ ನೋಟೀಸನ್ನು ಸಾಮಾನ್ಯ ಅಂಚೆಯ ಮೂಲಕ ಜಾರಿಗೊಳಿಸುವುದು
103. ನೋಟೀಸು, ಇತ್ಯಾದಿಗಳನ್ನು ಪಾಲಿಸದೆ ಇರುವ ಸಂದರ್ಭದಲ್ಲಿ ಅಧಿಕಾರ
104. ಒಡೆಯನು ತಪ್ಪಿದಲ್ಲಿ ಸಂದಾಯ ಮಾಡಲು ಅಧಿಭೋಗದಾರನ ಹೊಣೆ
105. ಒಡೆಯನು ತಪ್ಪಿದಲ್ಲಿ ಅಧಿಭೋಗದಾರನಿಂದ ಕಾಮಗಾರಿಯ ನಿರ್ವಹಣೆ ಮತ್ತು ಬಾಡಿಗೆಯಿಂದ ವೆಚ್ಚಗಳನ್ನು ಮುರಿದುಕೊಳ್ಳುವುದು
106. ಏಜೆಂಟರು ಮತ್ತು ನ್ಯಾಸಧಾರಿಗಳಿಗೆ ಪರಿಹಾರ
107. ಅಪರಾಧಿಗಳಿಂದ ಉಂಟಾದ ಹಾನಿಗಾಗಿ ಅವರು ಸಂದಾಯ ಮಾಡಬೇಕಾದ ನಷ್ಟ ಪರಿಹಾರ
108. ಬಾಕಿಗಳನ್ನು ವಸೂಲು ಮಾಡುವ ವಿಧಾನ
109. ಸಾಮಾನ್ಯ ದಂಡ
110. ಕಂಪನಿಗಳಿಂದ ಅಪರಾಧಗಳು
111. ಪ್ರಾಸಿಕ್ಯೂಷನ್‌ಗಳು
112. ಅಪರಾಧಗಳ ಬಗ್ಗೆ ರಾಜಿ
113. ಅಪರಾಧಿಗಳ ದಸ್ತಗಿರಿ
114. ಪೊಲೀಸ್ ಅಧಿಕಾರಿಗಳು ಮತ್ತು ನಿಗಮದ ನಿಯೋಜಿತರ ಕರ್ತವ್ಯಗಳು
115. ನೋಟೀಸುಗಳು ಮತ್ತು ಇತರ ದಸ್ತಾವೇಜುಗಳ ಸಿಂಧುತ್ವ
116. ಸಾಕ್ಷ್ಯವಾಗಿ ದಸ್ತಾವೇಜು ಅಥವಾ ನಮೂದಿನ ಅಂಗೀಕಾರಾರ್ಹತೆ
117. ಮಂಡಳಿಯ ಅಧಿಕಾರಿಗಳ ಸಾಕ್ಷ್ಯ
118. ಅಧಿಕಾರಗಳ ಪ್ರತ್ಯಾಯೋಜನೆ
119. ಮುಖ್ಯ ನಿಯಂತ್ರಣ ಪ್ರಾಧಿಕಾರ

120. ಅಪೀಲುಗಳು

121. ಪುನರೀಕ್ಷಣೆ

122. ನಿಯಮಗಳು ಮತ್ತು ವಿನಿಯಮಗಳನ್ನು ರಾಜ್ಯ ವಿಧಾನಮಂಡಲದ ಮುಂದೆ ಇಡತಕ್ಕುದು, ಇತ್ಯಾದಿ

123. ನೀರು ಸರಬರಾಜು ಅಥವಾ ಗ್ರಾಮಸಾರ ಚರಂಡಿಯ ಉದ್ಯಮಗಳಿಗೆ ಸಂಬಂಧಿಸಿದಂತೆ ನಿಯೋಜಿತರಾದ ನಿಗಮದ ನಿಯೋಜಿತರ ಬಗ್ಗೆ ಉಪಬಂಧಗಳು

124. ಮಂಡಳಿಯ ಸದಸ್ಯರು, ಅಧಿಕಾರಿಗಳು ಮತ್ತು ನೌಕರರು ಲೋಕನೌಕರರಾಗಿರತಕ್ಕುದು

125. ಮಂಡಳಿ, ಇತ್ಯಾದಿಯ ಬಗ್ಗೆ ಕ್ರಮದ ಸಂರಕ್ಷಣೆ

126. ದಾವೆಗಳ ಬಗ್ಗೆ ನೋಟೀಸನ್ನು ಕೊಡತಕ್ಕುದು

127. ನೇಮಕಾತಿಗಳು, ಅಧಿಸೂಚನೆಗಳು, ನಿಯಮಗಳು, ಉಪವಿಧಿಗಳು, ಇತ್ಯಾದಿಗಳ ಮುಂದುವರಿಕೆ

128. ಮೈಸೂರು ಅಧಿನಿಯಮ, 1949 LXIXರ ತಿದ್ದುಪಡಿ

129. ಈ ಅಧಿನಿಯಮವನ್ನು ಜಾರಿಗೊಳಿಸುವುದಕ್ಕಾಗಿನ ಆದೇಶಗಳು

130. ಅನುಸೂಚಿ

131. ಅಧಿಸೂಚನೆಗಳು.

## ಉದ್ದೇಶ ಮತ್ತು ಕಾರಣಗಳ ಹೇಳಿಕೆಗಳು

## I

**1964ರ ಅಧಿನಿಯಮ 36:-** ಪ್ರಸ್ತುತ, ಬೆಂಗಳೂರು ನೀರು ಸರಬರಾಜು ಯೋಜನೆಯ ಪ್ರಮುಖ ಕೆಲಸಗಳು ಮತ್ತು ಪ್ರಧಾನ ಕೊಳವೆಗಳನ್ನು ಹಾಕುವ ಕಾರ್ಯಗಳು ಸರ್ಕಾರದ ನಿಯಂತ್ರಣದಲ್ಲಿದ್ದರೆ, ನೀರು ಹಂಚಿಕೆ ಕಾರ್ಯವು ಬೆಂಗಳೂರು ಮುನ್ಸಿಪಲ್ ಕಾರ್ಪೋರೇಷನ್ನಿನ ನಿಯಂತ್ರಣದಲ್ಲಿದೆ. ಪ್ರಸ್ತುತ ನೀರು ಸರಬರಾಜು ಸಾಕಷ್ಟಿಲ್ಲದಿರುವುದರಿಂದ ಸರ್ಕಾರವು 26 ಕೋಟಿ ರೂ.ಗಳ ವೆಚ್ಚದ ಅಂದಾಜಿನಲ್ಲಿ ಕಾವೇರಿ ನೀರು ಸರಬರಾಜು ಯೋಜನೆಯನ್ನು ಮಂಜೂರು ಮಾಡಿದೆ. ಎಲ್ಲೆಲ್ಲಿ ಉದ್ದೇಶಿತ ನೀರು ಪೂರೈಕೆಯನ್ನು ಯೋಜಿಸಬೇಕಾಗಿದೆಯೋ ಅಲ್ಲೆಲ್ಲಾ ಈಗಿರುವ ನೀರು ಹಂಚಿಕೆ ವ್ಯವಸ್ಥೆಯನ್ನು ಬದಲಾಯಿಸುವುದು ಅವಶ್ಯಕವಾಗಿದೆ. ಹೊಸ ಯೋಜನೆಯಿಂದ ನೀರು ಸರಬರಾಜು ಸಾಕಷ್ಟು ಪ್ರಮಾಣದಲ್ಲಿ ಆಗುವುದರಿಂದ, ಅತ್ಯಂತ ಹೆಚ್ಚಿನ ಪ್ರಮಾಣದಲ್ಲಿ ನೀರನ್ನು ಬಳಸಿಕೊಳ್ಳಲು ಪ್ರಸ್ತುತ ಇರುವ ಭೂ ಅಂತರ್ಗತ ನೀರು ಪೂರೈಕೆ ವ್ಯವಸ್ಥೆಯನ್ನು ಸುಧಾರಣೆ ಮಾಡುವುದು ಅವಶ್ಯವಾಗಿದೆ. ಆದ್ದರಿಂದ, ನೀರು ಸರಬರಾಜು ಮತ್ತು ಗ್ರಾಮಸಾರ ಚರಂಡಿ ವ್ಯವಸ್ಥೆಯ ಕಾರ್ಯಭಾರವನ್ನು ಅದೇ ಪ್ರಾಧಿಕಾರಕ್ಕೆ ವಹಿಸಿಕೊಡುವುದು ಅವಶ್ಯವಾಗಿದೆ. ನೀರು ಸರಬರಾಜು ಯೋಜನೆಗೆ ಹಣಕಾಸು ಒದಗಿಸುವ ವಿಶ್ವಬ್ಯಾಂಕ್ ಪ್ರಾಧಿಕಾರಗಳು ಬೆಂಗಳೂರಿನಲ್ಲಿನ ನೀರು ಸರಬರಾಜು ಮತ್ತು ಒಳಚರಂಡಿ ಈ ಎರಡರ ಕಾರ್ಯಭಾರವನ್ನು ಒಂದು ಸ್ವತಂತ್ರ ಹಾಗೂ ಸ್ವಾಯತ್ತ ನಿಕಾಯಕ್ಕೆ ವಹಿಸಲು ಇಚ್ಛಿಸಿವೆ. ಈ ಉದ್ದೇಶಿತ ಮಂಡಲಿಯು, ಬೆಂಗಳೂರಿನಲ್ಲಿನ ನೀರು ಸರಬರಾಜು ಹಾಗೂ ಒಳಚರಂಡಿ ವ್ಯವಸ್ಥೆಯ ಕಾರ್ಯವನ್ನು ಮಾತ್ರವೇ ವಹಿಸಿಕೊಳ್ಳುತ್ತದೆ. ಪ್ರಸ್ತುತ, ವಿಧೇಯಕವು, ಬೆಂಗಳೂರಿಗಾಗಿ ನೀರು ಸರಬರಾಜು ಹಾಗೂ ಗ್ರಾಮಸಾರ ಚರಂಡಿ ಮಂಡಳಿಯನ್ನು ರಚಿಸುವುದಕ್ಕೆ ಅವಕಾಶ ಕಲ್ಪಿಸಿದೆ.

(ಕರ್ನಾಟಕ ರಾಜಪತ್ರ (ವಿಶೇಷ ಸಂಚಿಕೆ), ಭಾಗ IV-2ಎ, ದಿನಾಂಕ 25ನೇ ಜೂನ್, 1964ರ ಸಂಖ್ಯೆ 166, ಪುಟ 86ರಲ್ಲಿ ಪ್ರಕಟಿಸಲಾಗಿದೆ.)

## II

**1966ರ ತಿದ್ದುಪಡಿ ಮಾಡುವ ಅಧಿನಿಯಮ 6:-** ಪ್ರಸ್ತುತ, ಬೆಂಗಳೂರು ನೀರು ಸರಬರಾಜು ಮತ್ತು ಗ್ರಾಮಸಾರ ಚರಂಡಿ ಮಂಡಳಿಯು ಬೆಂಗಳೂರಿನಲ್ಲಿ ನೀರು ಸರಬರಾಜು ಮತ್ತು ಗ್ರಾಮಸಾರ ಚರಂಡಿ ವ್ಯವಸ್ಥೆಯನ್ನು ನಿರ್ವಹಿಸುತ್ತಿದೆ ಮತ್ತು ಸದ್ಯದಲ್ಲಿ ಅದು, ಹೆಚ್ಚಿನ ಹಣಕಾಸು ಒಪ್ಪಂದಗಳನ್ನು ಒಳಗೊಂಡ ದೀರ್ಘಕಾಲಿಕ ನೀರು ಸರಬರಾಜು ಮತ್ತು ಗ್ರಾಮಸಾರ ಯೋಜನೆಯ ಸಂಬಂಧದಲ್ಲಿ ಬೃಹತ್ ಪ್ರಮಾಣದ ಅಭಿವೃದ್ಧಿ ಕಾರ್ಯಗಳನ್ನು ಕೈಗೆತ್ತಿಕೊಳ್ಳುತ್ತದೆ. ಮಂಡಲಿಯು ತನಗೆ ವಹಿಸಿದ ಪ್ರಕಾರ್ಯಗಳು ಮತ್ತು ಜವಾಬ್ದಾರಿಗಳನ್ನು ಪರಿಣಾಮಕಾರಿಯಾಗಿ ನಿರ್ವಹಿಸುವ ಸಲುವಾಗಿ, 1964ರ ಬೆಂಗಳೂರು ನೀರು ಸರಬರಾಜು ಮತ್ತು ಗ್ರಾಮಸಾರ ಚರಂಡಿ ವ್ಯವಸ್ಥೆ ಮಂಡಳಿ ಅಧಿನಿಯಮದ ಮೂಲಕ ಮಂಡಳಿಗೆ ಈಗ ನೀಡಲು ಉದ್ದೇಶಿಸಿರುವದಕ್ಕಿಂತ ಹೆಚ್ಚಿನ ಸ್ವಾತಂತ್ರವನ್ನು ನೀಡಬೇಕಾಗುತ್ತದೆ. ಅಲ್ಲದೆ ಪ್ರತಿ ವರ್ಷ ಆದಾಯದ ಬಾಬಿಗೆ ಖರ್ಚುಹಾಕಲು ಇಳುವರಿಗೆ ಅವಕಾಶ ಕಲ್ಪಿಸುವುದರ ಸಹಿತ ಅದೇ ಸ್ವರೂಪದ ಉದ್ಯಮವು ಕೇಳುವ ಮಾಹಿತಿಯನ್ನು ಒದಗಿಸುವ ಸಲುವಾಗಿ, ಮಂಡಲಿಯ ಲೆಕ್ಕಪತ್ರ ವ್ಯವಸ್ಥೆಯು ವಾಣಿಜ್ಯ ತತ್ವಗಳಿಗನುಸಾರ ಇರಬೇಕೆಂದೂ ಸಹಾ

ಪರಿಗಣಿಸಲಾಗಿದೆ. ಸರ್ಕಾರವು ಮಂಡಳಿಗೆ ವರ್ಗಾಯಿಸಿದ ಸ್ವತ್ತುಗಳ ಮೌಲ್ಯದ ಮೇಲಿನ ಬಡ್ಡಿಯನ್ನು ಸರ್ಕಾರಕ್ಕೆ ಸಂದಾಯ ಮಾಡಲು, ಮಂಡಳಿಯನ್ನು ಸಮರ್ಥಗೊಳಿಸಲು ಶಾಸನಬದ್ಧ ಉಪಬಂಧವನ್ನು ಕಲ್ಪಿಸಬೇಕಾಗುತ್ತದೆ. ಮಂಡಳಿಯ ಕೆಲಸ ಕಾರ್ಯಗಳನ್ನು ಸುಧಾರಿಸಲು ಇತರ ಕೆಲವೊಂದು ಚಿಕ್ಕಪುಟ್ಟ ತಿದ್ದುಪಡಿಗಳನ್ನು ಮಾಡುವುದು ಅವಶ್ಯಕವೆಂದು ಕಂಡುಬಂದಿದೆ.

ಆದ್ದರಿಂದ ಈ ವಿಧೇಯಕ.

(ಕರ್ನಾಟಕ ರಾಜಪತ್ರ (ವಿಶೇಷ ಸಂಚಿಕೆ) ಭಾಗ -IV 2ಎ ದಿನಾಂಕ 12ನೇ ಅಕ್ಟೋಬರ್, 1965ರ ಸಂಖ್ಯೆ 192ಎ, ಪುಟ 14 ರಲ್ಲಿ ಪ್ರಕಟಿಸಲಾಗಿದೆ.)

## III

**1966ರ ತಿದ್ದುಪಡಿ ಮಾಡುವ ಅಧಿನಿಯಮ 10:–** ಸಾರ್ವಜನಿಕರಿಗೆ ಹೆಚ್ಚಿನ ಸೌಕರ್ಯಗಳನ್ನು ಒದಗಿಸಲು, ನಿಗಮದ ಸಂಪನ್ಮೂಲಗಳನ್ನು ವೃದ್ಧಿಗೊಳಿಸಲು ಮತ್ತು ನಿಧಾನಗತಿಯನ್ನು ತಡೆಯುವ ಮೂಲಕ ನಿಗಮದ ಆಡಳಿತವನ್ನು ಕ್ರಮಬದ್ಧಗೊಳಿಸುವ ಸಲುವಾಗಿ ಕೆಲವು ಸಂಗತಿಗಳಿಗೆ ಸಂಬಂಧಪಟ್ಟಂತೆ, 1949ರ ಬೆಂಗಳೂರು ನಗರ ಮುನ್ಸಿಪಲ್ ಕಾರ್ಪೋರೇಷನ್ ಅಧಿನಿಯಮವನ್ನು ತಿದ್ದುಪಡಿ ಮಾಡುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

(ಕರ್ನಾಟಕ ರಾಜಪತ್ರ (ವಿಶೇಷ ಸಂಚಿಕೆ) ಭಾಗ -IV 2ಎ ದಿನಾಂಕ 23ನೇ ಫೆಬ್ರವರಿ, 1966ರ ಸಂಖ್ಯೆ 30, ಪುಟ 18ರಲ್ಲಿ ಪ್ರಕಟಿಸಲಾಗಿದೆ.)

## IV

**1984ರ ತಿದ್ದುಪಡಿ ಮಾಡುವ ಅಧಿನಿಯಮ 18:–** ಹಣಕಾಸಿನ ಮೇಲೆ ಉತ್ತಮ ನಿಯಂತ್ರಣವನ್ನು ಹೊಂದಲು ಮತ್ತು ಅದರ ಲೆಕ್ಕಪತ್ರಗಳ ಕಾರ್ಯವಿಧಾನಗಳನ್ನು ಮತ್ತಷ್ಟು ಕ್ರಮಬದ್ಧಗೊಳಿಸುವ ಸಲುವಾಗಿ, ಬೆಂಗಳೂರು ನೀರು ಸರಬರಾಜು ಮತ್ತು ಗ್ರಾಮಸಾರ ಚರಂಡಿ ವ್ಯವಸ್ಥೆ ಮಂಡಳಿಯ ಲೆಕ್ಕ ಪರಿಶೋಧನೆಯನ್ನು ಭಾರತದ ಕಂಟ್ರೋಲರ್ ಮತ್ತು ಆಡಿಟರ್ ಜನರಲ್ಲನಿಗೆ ವಹಿಸಬಹುದೆಂದು ಸಾರ್ವಜನಿಕ ಲೆಕ್ಕಪತ್ರ ಸಮಿತಿಯು ಸಲಹೆ ನೀಡಿದೆ. ತದನುಸಾರವಾಗಿ, ತನ್ನ ಆಯ್ಕೆಯಂತೆ ಲೆಕ್ಕಪರಿಶೋಧಕರನ್ನು ನೇಮಕ ಮಾಡಲು ಸರ್ಕಾರವನ್ನು ಅಧಿಕೃತಗೊಳಿಸುವ ಬೆಂಗಳೂರು ನೀರು ಸರಬರಾಜು ಮತ್ತು ಗ್ರಾಮಸಾರ ಚರಂಡಿ ಮಂಡಳಿ ಅಧಿನಿಯಮದ 25ನೇ ಪ್ರಕರಣವನ್ನು ತಿದ್ದುಪಡಿ ಮಾಡಲು ಉದ್ದೇಶಿಸಲಾಗಿದೆ.

ಈ ಅಧಿನಿಯಮದ 32ನೇ ಪ್ರಕರಣವು, ಗೃಹಬಳಕೆಯ ಉದ್ದೇಶಗಳಿಗಾಗಿ ನೀರು ಸರಬರಾಜು ಮಾಡಲು ಅವಕಾಶ ಕಲ್ಪಿಸಿದೆ. ಕಕ್ಕಸುಗಳು ಅಥವಾ ಚರಂಡಿಗಳನ್ನು ತೊಳೆಯುವುದಕ್ಕಾಗಿ ಮತ್ತು ಈಜುವ ಕೊಳಗಳು ಅಥವಾ ಸಾರ್ವಜನಿಕ ಸ್ನಾನದ ಗೃಹಗಳನ್ನು ಹೊರತುಪಡಿಸಿ, ಇತರ ಎಲ್ಲ ಸ್ನಾನದ ಗೃಹಗಳಿಗಾಗಿರುವ ನೀರು ಸರಬರಾಜು ಗೃಹಬಳಕೆಯ ಉದ್ದೇಶಕ್ಕಾಗಿರುವ ನೀರು ಸರಬರಾಜನ್ನು ಒಳಗೊಂಡಿದೆ ಎಂದು ಭಾವಿಸತಕ್ಕದೆಂದು 33ನೇ ಪ್ರಕರಣವು ನಿರ್ದಿಷ್ಟಪಡಿಸಿದೆ. 35ನೇ ಪ್ರಕರಣವು ಗೃಹೇತರ ಉದ್ದೇಶಗಳಿಗಾಗಿ ನೀರು ಸರಬರಾಜು ಮಾಡಲು ಅವಕಾಶ ಕಲ್ಪಿಸಿದೆ. ಬೆಂಗಳೂರು ನಗರದಲ್ಲಿನ ಹೋಟೆಲ್‌ಗಳಿಗೆ ಸರಬರಾಜಾಗುವ ನೀರಿಗೆ ಗೃಹಯೇತರ ಉದ್ದೇಶಗಳಿಗಾಗಿ ನಿಗದಿಪಡಿಸಿದ ದರಗಳಲ್ಲಿ ಚಾರ್ಜ್‌ಗಳನ್ನು ವಿಧಿಸಲಾಗುತ್ತದೆ.

ಆದ್ದರಿಂದ, 1974ರ ರಿಟ್ ಅರ್ಜಿ ಸಂಖ್ಯೆಗಳು 6160ರಲ್ಲಿ ಮತ್ತು ಕೆಲವು ಹೊಟೇಲ್‌ಗಳು ದಾಖಲ್ಮಾಡಿದ ಇತರ ರಿಟ್ ಅರ್ಜಿಗಳಲ್ಲಿ, ಕರ್ನಾಟಕದ ಗೌರವಾನ್ವಿತ ನ್ಯಾಯಾಲಯವು ರಿಟ್ ಅರ್ಜಿಯನ್ನು ಸಲ್ಲಿಸಿದ ದಿನಾಂಕದಿಂದ ಪ್ರತಿಯೊಬ್ಬ ಅರ್ಜಿದಾರರ ಉದ್ಯಮಗಳ ಸಂಬಂಧದಲ್ಲಿ, ಅನುಕ್ರಮವಾಗಿ ಗೃಹ ಬಳಕೆಗಾಗಿ ಮತ್ತು ಗೃಹಯೇತರ ಉದ್ದೇಶಗಳಿಗಾಗಿ ಉಪಯೋಗಿಸಿದ ನೀರಿನ ಶೇಕಡಾ ಪ್ರಮಾಣವನ್ನು ನಿರ್ಧರಿಸುವಂತೆ ಮಂಡಳಿಗೆ ನಿರ್ದೇಶನ ನೀಡಿದೆ. ಈಗ ಹೊಟೇಲ್‌ಗಳು ವಾಣಿಜ್ಯ ಮಾರ್ಗದಲ್ಲಿ ನಡೆಯುತ್ತಿರುವುದರಿಂದ ಸಂಪೂರ್ಣ ನೀರು ಸರಬರಾಜಿಗೆ ಗೃಹಯೇತರ ಬಳಕೆಯ ದರಗಳಲ್ಲಿ ಚಾರ್ಜನ್ನು ವಿಧಿಸಬೇಕು ಮತ್ತು ಈಗಾಗಲೇ ಈ ದರಗಳಲ್ಲಿ ಸಂಗ್ರಹಿಸಿದ ಹಣ ಸಂಗ್ರಹವನ್ನು ಸಿಂಧುಗೊಳಿಸುವುದು ಅವಶ್ಯಕವಾಗಿದೆ.

ಆದ್ದರಿಂದ ಈ ವಿಧೇಯಕ.

(ಕರ್ನಾಟಕ ರಾಜಪತ್ರ (ವಿಶೇಷ ಸಂಚಿಕೆ) ಭಾಗ -IV 2ಎ ದಿನಾಂಕ 18ನೇ ಜನವರಿ, 1984ರ ಸಂಖ್ಯೆ 48, ಪುಟ 4ರಲ್ಲಿ ಪ್ರಕಟಿಸಲಾಗಿದೆ.)

# 1964 ಕರ್ನಾಟಕ ಅಧಿನಿಯಮ ಸಂಖ್ಯೆ 36

(1964ರ ಸೆಪ್ಟೆಂಬರ್ ಹತ್ತನೇ ದಿವಸದಂದು [1][ಕರ್ನಾಟಕ ರಾಜಪತ್ರ][1] ದಲ್ಲಿ ಮೊದಲು ಪ್ರಕಟವಾಯಿತು.)

## ಬೆಂಗಳೂರು ನೀರು ಸರಬರಾಜು ಮತ್ತು ಗ್ರಾಮಸಾರ ಚರಂಡಿ ವ್ಯವಸ್ಥೆ ಅಧಿನಿಯಮ, 1964

(1964ರ ಆಗಸ್ಟ್ ಇಪ್ಪತ್ತೇಳನೇ ದಿವಸದಂದು ರಾಷ್ಟ್ರಪತಿಯ ಅನುಮತಿಯನ್ನು ಪಡೆಯಿತು.)
(1966ರ 6, 1966ರ 10 ಮತ್ತು 1984ರ 18ರ ಕರ್ನಾಟಕ ಅಧಿನಿಯಮಗಳ ಮೂಲಕ ತಿದ್ದುಪಡಿಯಾದಂತೆ.)

**ಬೆಂಗಳೂರು ಮಹಾನಗರ ಪ್ರದೇಶದಲ್ಲಿ ನೀರು ಸರಬರಾಜು, ಗ್ರಾಮಸಾರ ಚರಂಡಿ ವ್ಯವಸ್ಥೆ ಮತ್ತು ಗ್ರಾಮಸಾರ ವಿಲೆ ಇವುಗಳಿಗಾಗಿ ಮತ್ತು ಅದಕ್ಕೆ ಸಂಬಂಧಪಟ್ಟ ವಿಷಯಗಳಿಗಾಗಿ ಉಪಬಂಧಿಸುವ ಅಧಿನಿಯಮ.**

ಬೆಂಗಳೂರು ಮಹಾನಗರ ಪ್ರದೇಶದಲ್ಲಿ ನೀರು ಸರಬರಾಜು, ಗ್ರಾಮಸಾರ ಚರಂಡಿ ವ್ಯವಸ್ಥೆ ಮತ್ತು ಗ್ರಾಮಸಾರ ವಿಲೆ ಇವುಗಳಿಗಾಗಿ ಮತ್ತು ಅದಕ್ಕೆ ಸಂಬಂಧಪಟ್ಟ ವಿಷಯಗಳಿಗಾಗಿ ಉಪಬಂಧಿಸುವುದು ವಿಹಿತರಾಗಿರುವುದರಿಂದ;

ಭಾರತ ಗಣರಾಜ್ಯದ ಹದಿನೈದನೇ ವರ್ಷದಲ್ಲಿ [1][ಕರ್ನಾಟಕ][1] ರಾಜ್ಯ ವಿಧಾನಮಂಡಲದಿಂದ
ಈ ಕೆಳಕಂಡಂತೆ ಅಧಿನಿಯಮಿತವಾಗತಕ್ಕುದು:-

## ಅಧ್ಯಾಯ-I

### ಪ್ರಾರಂಭಿಕ

1. **ಚಿಕ್ಕ ಹೆಸರು ಮತ್ತು ಪ್ರಾರಂಭ :-** (1) ಈ ಅಧಿನಿಯಮವನ್ನು ಬೆಂಗಳೂರು ನೀರು ಸರಬರಾಜು ಮತ್ತು ಗ್ರಾಮಸಾರ ಚರಂಡಿ ವ್ಯವಸ್ಥೆ ಅಧಿನಿಯಮ, 1964 ಎಂದು ಕರೆಯತಕ್ಕುದು.

(2) ಈ ಅಧಿನಿಯಮದ I,II,III ಮತ್ತು VI ನೇ ಅಧ್ಯಾಯಗಳು ಈ ಕೂಡಲೇ ಜಾರಿಗೆ ಬರತಕ್ಕುದು ಮತ್ತು ಈ ಅಧಿನಿಯಮದ IVನೇ ಅಧ್ಯಾಯ ಮತ್ತು Vನೇ ಅಧ್ಯಾಯಗಳು ಅನುಕ್ರಮವಾಗಿ ರಾಜ್ಯ ಸರ್ಕಾರವು ಸರ್ಕಾರಿ ರಾಜಪತ್ರದಲ್ಲಿ ಅಧಿಸೂಚನೆಯ ಮೂಲಕ ಗೊತ್ತುಪಡಿಸಬಹುದಾದಂಥ [2][ದಿನಾಂಕಗಳಂದು][2] ಜಾರಿಗೆ ಬರತಕ್ಕುದು.

2. **ಪರಿಭಾಷೆಗಳು:-** ಈ ಅಧಿನಿಯಮದಲ್ಲಿ ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,-

(1) 'ಬೆಂಗಳೂರು ಮಹಾನಗರ ಪ್ರದೇಶ' ಎಂದರೆ, ಬೆಂಗಳೂರು ನಗರ ಜಿಲ್ಲೆಯ ಪ್ರದೇಶ ಮತ್ತು ಇದು ರಾಜ್ಯಸರ್ಕಾರವು ಕಾಲಕಾಲಕ್ಕೆ ಅಧಿಸೂಚನೆಯ ಮೂಲಕ ನಿರ್ದಿಷ್ಟಪಡಿಸಬಹು
ದಾದಂಥ ಇತರ ಹೊಂದಿಕೊಂಡಿರುವ ಪ್ರದೇಶಗಳನ್ನು ಒಳಗೊಳ್ಳುತ್ತದೆ;

(2) 'ಮಂಡಳಿ' ಎಂದರೆ, ಈ ಅಧಿನಿಯಮದ ಮೇರೆಗೆ ರಚಿಸಲಾದ ಬೆಂಗಳೂರು ನೀರು ಸರಬರಾಜು ಮತ್ತು ಚರಂಡಿ ಮಂಡಳಿ;

(3) 'ಕಟ್ಟಡ' ಎಂದರೆ ಮನೆ, ಔಟ್ ಹೌಸ್, ಲಾಯ, ಕಕ್ಕಸು, ಮೂತ್ರಿಗಳು, ಶೆಡ್ಡು, ಗುಡಿಸಲು ಅಥವಾ ಕಲ್ಲು, ಇಟ್ಟಿಗೆ, ಮರ, ಮಣ್ಣು, ಲೋಹ ಅಥವಾ ಇತರ ಸಾಮಗ್ರಿಯಿಂದ ನಿರ್ಮಿಸಿದ ಯಾವುದೇ ಇತರ ರಚನೆ. ಆದರೆ ಇದು ಸಾಗಿಸಬಹುದಾದ ಯಾವುದೇ ಇತರ ಆಶ್ರಯವನ್ನು ಒಳಗೊಳ್ಳುವುದಿಲ್ಲ;

[3][(3ಎ) 'ಉಪ ವಿಧಿಗಳು' ಎಂದರೆ ಈ ಅಧಿನಿಯಮದ ಮೇರೆಗೆ ಮಂಡಳಿಯು ರಚಿಸಿದ ಉಪವಿಧಿಗಳು;][3]

(4) 'ಮುಖ್ಯಇಂಜಿನಿಯರ್' ಎಂದರೆ, ಈ ಅಧಿನಿಯಮದ ಮೇರೆಗೆ ಮುಖ್ಯ ಇಂಜಿನಿಯರನ ಪ್ರಕಾರ್ಯಗಳನ್ನು ನೆರವೇರಿಸಲು ಮಂಡಲಿಯು ನೇಮಕ ಮಾಡಿದ ಅಥವಾ ಅಧಿಕೃತಗೊಳಿಸಿದ ಅಧಿಕಾರಿ ಮತ್ತು ಇದು ಮುಖ್ಯ ಇಂಜಿನಿಯರನ ಕರ್ತವ್ಯಗಳ ಹೆಚ್ಚಿನ ಪ್ರಭಾರದಲ್ಲಿಟ್ಟಿರುವ ಅಧಿಕಾರಿಯನ್ನೂ ಒಳಗೊಳ್ಳುತ್ತದೆ;

(5) 'ಬೆಂಗಳೂರು ನಗರ' ಎಂದರೆ ಬೆಂಗಳೂರು ನಗರ ಪೌರ ನಿಗಮ ಅಧಿನಿಯಮ, 1949 (ಮೈಸೂರು ಅಧಿನಿಯಮ 1949ರ ಸಂಖ್ಯೆ 69)ರಲ್ಲಿ ಪರಿಭಾಷಿಸಿರುವಂತೆ ಬೆಂಗಳೂರು ನಗರ;

(6) 'ಸಂಪರ್ಕ ಕೊಳವೆ ' ಎಂದರೆ -

(ಎ) ನೀರು ಸರಬರಾಜು ಮಾಡಲಾಗಿರುವ ಆವರಣವು, ಪ್ರಧಾನ ಕೊಳವೆಯನ್ನು ಹಾಕಿರುವಂಥ ಬೀದಿಯ ಭಾಗಕ್ಕೆ ಲಗತ್ತಾಗಿರುವಲ್ಲಿ ಮತ್ತು ಸರ್ವೀಸ್ ಪೈಪು, ಬೀದಿಯಲ್ಲಿರುವ ಕಟ್ಟಡದ ಹೊರಗೋಡೆಯ ಮೂಲಕವಲ್ಲದೆ ಅನ್ಯಥಾ ಆ ಆವರಣದೊಳಕ್ಕೆ ಹೋಗಿರುವಲ್ಲಿ ಮತ್ತು ಆ ಆವರಣದಲ್ಲಿ ಮತ್ತು ಆ ಬೀದಿಯ ಗಡಿಯ ಹತ್ತಿರದಲ್ಲಿ ಯುಕ್ತವಾಗಿ ಸಾಧ್ಯವಾಗಬಹುದಾದಷ್ಟರ ಮಟ್ಟಿಗೆ ಒಂದು ನಿಲು ಬಿರುಡೆಯನ್ನು ಇಟ್ಟಿರುವಲ್ಲಿ ಆ ಪ್ರಧಾನ ಕೊಳವೆ ಮತ್ತು ಆ ನಿಲು ಬಿರುಡೆಯ ನಡುವೆ ಇರುವಷ್ಟರ ಮಟ್ಟಿಗೆ ಆ ಸರ್ವಿಸು ಪೈಪು;

---

1. 1973ರ ಕರ್ನಾಟಕ ಕಾನೂನುಗಳ ಅಳವಡಿಕೆಗಳ ಆದೇಶದ ಮೂಲಕ 1.11.1973 ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.
2. ಅಧಿಸೂಚನೆಗಳ ಮೂಲಕ ಅಧ್ಯಾಯ IV 1.12.1964 ರಿಂದ ಜಾರಿಗೆ ಬಂದಿದೆ ಮತ್ತು ಅಧ್ಯಾಯ V 2.12.1964 ರಿಂದ ಜಾರಿಗೆ ಬಂದಿದೆ. ಅಧಿಸೂಚನೆಗಳ ಪಾಠವು 47ನೇ ಪುಟಗಳಲ್ಲಿವೆ.
3. 1966ರ ಅಧಿನಿಯಮ ಸಂಖ್ಯೆ 6 ರ ಮೂಲಕ 17.3.1966 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(ಬಿ) ಯಾವುದೇ ಇತರ ಸಂದರ್ಭದಲ್ಲಿ, ಆ ಪ್ರಧಾನ ಕೊಳವೆಯ ಮತ್ತು ಆ ಪ್ರಧಾನ ಕೊಳವೆಯನ್ನು ಹಾಕಲಾಗಿರುವಂಥ ಬೀದಿಯ ಗಡಿಯ ನಡುವೆ ಇರುವ ಸರ್ವೀಸ್ ಪೈಪು ಮತ್ತು ಇದು ಪ್ರಧಾನ ಕೊಳವೆಯೊಂದಿಗೆ ಸರ್ವೀಸು ಪೈಪು ಕೂಡಿಕೊಳ್ಳುವ ಸ್ಥಳದಲ್ಲಿನ ಪಟ್ಟಿಯನ್ನು, ಮತ್ತು,-

(i) ಆ ಸಂಪರ್ಕ ಕೊಳವೆಯು ಒಂದು ನಿಲುಬಿರುಡೆಯಲ್ಲಿ ಕೊನೆಗೊಳ್ಳುವಲ್ಲಿ, ಆ ನಿಲುಬಿರುಡೆಯನ್ನು; ಮತ್ತು

(ii) ಸಂಪರ್ಕ ಕೊಳವೆಯ ಕೊನೆಯ ಮತ್ತು ಪ್ರಧಾನ ಕೊಳವೆಯ ನಡುವೆ ಅದರ ಮೇಲೆ ಜೋಡಿಸಿರುವ ಯಾವುದೇ ನಿಲುಬಿರುಡೆಯನ್ನು

- ಸಹ ಒಳಗೊಳ್ಳುತ್ತದೆ;

(7) 'ನಿಗಮ' ಎಂದರೆ ಬೆಂಗಳೂರು ನಗರದ ಪೌರನಿಗಮ;

(8) 'ಚರಂಡಿ' ಎಂಬುದು ಗ್ರಾಮಸಾರದ ಚರಂಡಿ, ಸುರಂಗ, ಅಡಿ ಗಾಲುವೆ, ಗುಂಡಿ, ಕಾಲುವೆ ಮತ್ತು ಗ್ರಾಮಸಾರ ಹೊಲಸು ಪದಾರ್ಥ, ಮಲಿನಗೊಂಡ ನೀರು, ಪೋಲಾದ ನೀರು, ಮಳೆಯ ನೀರು ಅಥವಾ ಅಂತರ್ಜಲ ಇವುಗಳು ಹರಿಸುವುದಕ್ಕಾಗಿರುವ ಯಾವುದೇ ಇತರ ಸಾಧನವನ್ನು ಒಳಗೊಳ್ಳುತ್ತದೆ;

(9) 'ಭೂಮಿ' ಎಂಬುದು ಭೂಮಿಯಿಂದ ಉದ್ಭವಿಸುವ ಪ್ರಯೋಜನಗಳು, ನೆಲಕ್ಕೆ ಲಗತ್ತಾದ ಅಥವಾ ನೆಲಕ್ಕೆ ಲಗತ್ತಾದ ಯಾವುದಕ್ಕಾದರೂ ಖಾಯಂ ಆಗಿ ಬಿಗಿದಿರುವ ವಸ್ತುಗಳು ಮತ್ತು ಯಾವುದೇ ಬೀದಿಯ ಮೇಲೆ ಕಾನೂನಿನ ಮೂಲಕ ಸೃಜಿಸಿರುವ ಹಕ್ಕುಗಳನ್ನು ಒಳಗೊಳ್ಳುತ್ತದೆ;

(10) 'ಲೈಸೆನ್ಸ್ ಪಡೆದ ಕೊಳಾಯಿಗಾರ' ಎಂದರೆ ಕೊಳಾಯಿಗಾರನಾಗಿ ಈ ಅಧಿನಿಯಮದ ಉಪಬಂಧಗಳ ಮೇರೆಗೆ ಲೈಸೆನ್ಸನ್ನು ಪಡೆದಿರುವ ವ್ಯಕ್ತಿ;

(11) 'ಪ್ರಧಾನ ಕೊಳವೆ ' ಎಂದರೆ ವ್ಯಕ್ತಿಗತವಾಗಿ ಗ್ರಾಹಕರಿಗೆ ಮಾಡಿದ ಸರಬರಾಜಿಗೆ ಭಿನ್ನವಾಗಿ, ಸಾಮಾನ್ಯವಾಗಿ ನೀರು ಸರಬರಾಜನ್ನು ಮಾಡುವ ಉದ್ದೇಶಕ್ಕಾಗಿ[1][xxx][1] ಹಾಕಿರುವ ಕೊಳವೆ ಮತ್ತು ಇದು ಅಂಥ ಕೊಳವೆಗೆ ಸಂಬಂಧಿಸಿದಂತೆ ಬಳಸಿರುವ ಯಾವುದೇ ಸಾಧನವನ್ನು ಒಳಗೊಳ್ಳುತ್ತದೆ;

(12) 'ಅಧಿಸೂಚನೆ ' ಎಂದರೆ ರಾಜ್ಯಪತ್ರದಲ್ಲಿ ಪ್ರಕಟಿಸಿದ ಅಧಿಸೂಚನೆ;

(13) 'ಅಧಿಭೋಗದಾರ ' ಎಂಬುದು -

(ಎ) ಯಾವ ಭೂಮಿ ಅಥವಾ ಕಟ್ಟಡಕ್ಕೆ ಸಂಬಂಧಿಸಿದಂತೆ ಬಾಡಿಗೆಯನ್ನು ಸಂದಾಯ ಮಾಡಲಾಗುತ್ತದೆಯೋ ಅಥವಾ ಸಂದಾಯ ಮಾಡಬೇಕಾಗಿದೆಯೋ ಅಂಥ ಭೂಮಿ ಅಥವಾ ಕಟ್ಟಡದ ಬಾಡಿಗೆ ಅಥವಾ ಬಾಡಿಗೆಯ ಯಾವುದೇ ಭಾಗವನ್ನು ತತ್ಕಾಲದಲ್ಲಿ ಒಡೆಯನಿಗೆ ಸಂದಾಯ ಮಾಡುತ್ತಿರುವ ಅಥವಾ ಸಂದಾಯ ಮಾಡಲು ಹೊಣೆಗಾರನಾದ ಯಾವನೇ ವ್ಯಕ್ತಿಯನ್ನು;

(ಬಿ) ಅವನ ಭೂಮಿ ಅಥವಾ ಕಟ್ಟಡದ ಅಧಿಭೋಗದಲ್ಲಿರುವ ಅಥವಾ ಅದನ್ನು ಅನ್ಯಥಾ ಉಪಯೋಗಿಸುತ್ತಿರುವ ಒಡೆಯನನ್ನು;

(ಸಿ) ಯಾವುದೇ ಭೂಮಿ ಅಥವಾ ಕಟ್ಟಡದ ಬಾಡಿಗೆರಹಿತ ಬಾಡಿಗೆದಾರನನ್ನು;

(ಡಿ) ಯಾವುದೇ ಭೂಮಿ ಅಥವಾ ಕಟ್ಟಡದ ಅಧಿಭೋಗದಲ್ಲಿರುವ ಲೈಸೆನ್ಸುದಾರನನ್ನು; ಮತ್ತು

(ಇ) ಯಾವುದೇ ಭೂಮಿ ಅಥವಾ ಕಟ್ಟಡದ ಬಳಕೆ ಮತ್ತು ಅಧಿಬೋಗಕ್ಕಾಗಿನ ಹಾನಿಪರಿಹಾರಗಳನ್ನು ಒಡೆಯನಿಗೆ ಸಂದಾಯಮಾಡಲು ಹೊಣೆಗಾರನಾಗಿರುವ ಯಾವನೇ ವ್ಯಕ್ತಿಯನ್ನು

- ಒಳಗೊಳ್ಳುತ್ತದೆ;

(14) 'ಒಡೆಯ ' ಎಂಬುದು ಅವನ ಸ್ವಂತ ಜವಾಬ್ದಾರಿಯ ಮೇಲಾಗಲಿ ಅಥವಾ ಅವನ ಹಾಗೂ ಇತರರ ಜವಾಬ್ದಾರಿಯ ಮೇಲಾಗಲಿ ಅಥವಾ ಯಾವನೇ ಇತರ ವ್ಯಕ್ತಿಗಾಗಿ ಏಜೆಂಟ್, ನ್ಯಾಸಧಾರಿ, ಪಾಲಕ ಅಥವಾ ರಿಸೀವರ್ ಎಂದು ಯಾವುದೇ ಭೂಮಿ ಅಥವಾ ಕಟ್ಟಡದ ಬಾಡಿಗೆಯನ್ನು ತತ್ಕಾಲದಲ್ಲಿ ಸ್ವೀಕರಿಸುತ್ತಿರುವ ಅಥವಾ ಸ್ವೀಕರಿಸಲು ಹಕ್ಕುಳ್ಳವನಾಗಿರುವ ಅಥವಾ ಆ ಭೂಮಿ ಅಥವಾ ಕಟ್ಟಡ ಅಥವಾ ಅದರ ಭಾಗವನ್ನು ಬಾಡಿಗೆದಾರನಿಗೆ ಬಾಡಿಗೆಗೆ ಕೊಟ್ಟಿದ್ದರೆ ಆ ಬಾಡಿಗೆಯನ್ನು ಹಾಗೆ ಸ್ವೀಕರಿಸುವ ಅಥವಾ ಸ್ವೀಕರಿಸಲು ಹಕ್ಕುಳ್ಳವನಾಗಿರುವ ವ್ಯಕ್ತಿಯನ್ನು ಒಳಗೊಳ್ಳುತ್ತದೆ;

(15) 'ಆವರಣ' ಎಂದರೆ ಯಾವುದೇ ಭೂಮಿ ಅಥವಾ ಕಟ್ಟಡ ಅಥವಾ ಕಟ್ಟಡದ ಭಾಗ; ಮತ್ತು ಇದು, -

(ಎ) ಕಟ್ಟಡ ಅಥವಾ ಕಟ್ಟಡದ ಭಾಗಕ್ಕೆ ಲಗತ್ತಾಗಿರುವ ತೋಟ, ಭೂಮಿ ಮತ್ತು ಔಟ್ ಹೌಸ್ ಯಾವುದಾದರೂ ಇದ್ದರೆ, ಅವುಗಳನ್ನು; ಮತ್ತು

(ಬಿ) ಕಟ್ಟಡ ಅಥವಾ ಕಟ್ಟಡದ ಭಾಗಕ್ಕೆ ಅದರ ಇನ್ನೂ ಹೆಚ್ಚಿನ ಪ್ರಯೋಜನಕಾರಿ ಉಪಯೋಗಕ್ಕಾಗಿ ಜೋಡಿಸಿರುವ ಯಾವುದೇ ಜೋಡಣೆಗಳನ್ನು

- ಒಳಗೊಳ್ಳುತ್ತದೆ;

(16) 'ನಿಯಮಿಸಲಾದುದು' ಎಂದರೆ ಈ ಅಧಿನಿಯಮದ ಮೇರೆಗೆ ಸಂದರ್ಭಾನುಸಾರ ರಚಿಸಿದ ನಿಯಮಗಳು ಅಥವಾ ವಿನಿಯಮಗಳ ಮೂಲಕ ನಿಯಮಿಸಲಾದುದು;

1. 1966ರ ಅಧಿನಿಯಮ ಸಂಖ್ಯೆ 6ರ ಮೂಲಕ 17-03-1966 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

(17) 'ನಿಯಮಿಸಿದ ಅಧಿಕಾರಿ' ಎಂದರೆ ಈ ಅಧಿನಿಯಮದ ಮೇರೆಗೆ ರಚಿಸಿದ ವಿನಿಯಮಗಳ ಮೂಲಕ ನಿಯಮಿಸಿದ ಅಧಿಕಾರಿ;

(18) 'ವಿನಿಯಮಗಳು' ಎಂದರೆ ಈ ಅಧಿನಿಯಮದ ಮೇರೆಗೆ ಮಂಡಲಿಯು ರಚಿಸಿದ ವಿನಿಯಮಗಳು;

(19) 'ನಿಯಮಗಳು' ಎಂದರೆ ಈ ಅಧಿನಿಯಮದ ಮೇರೆಗೆ ರಾಜ್ಯ ಸರ್ಕಾರವು ರಚಿಸಿದ ನಿಯಮಗಳು;

(20) 'ಸ್ಯಾನಿಟರಿ ಇಂಜಿನಿಯರ್' ಎಂದರೆ ಸ್ಯಾನಿಟರಿ ಇಂಜಿನಿಯರ್ ಆಗಿರಲು ಮಂಡಳಿಯು ನೇಮಕ ಮಾಡಿದ ಅಧಿಕಾರಿ ಮತ್ತು ಇದು ಸ್ಯಾನಿಟರಿ ಇಂಜಿನಿಯರನ ಕರ್ತವ್ಯಗಳ ಹೆಚ್ಚಿನ ಪ್ರಭಾರದಲ್ಲಿ ಇಟ್ಟಿರುವ ಯಾವನೇ ಅಧಿಕಾರಿಯನ್ನೂ ಒಳಗೊಳ್ಳುತ್ತದೆ;

(21) 'ಸರ್ವೀಸ್ ಪೈಪು' ಎಂದರೆ ಪ್ರಧಾನ ಕೊಳವೆಯಿಂದ ನೀರು ಹಾಯಿಸುವ ಒತ್ತಡದ ಪ್ರಮಾಣಕ್ಕೆ ಒಳಪಟ್ಟು ಅಥವಾ ಯಾವುದೇ ನಲ್ಲಿಯನ್ನು ನಿಲ್ಲಿಸದಿದ್ದರೆ ಆ ಒತ್ತಡದ ಪ್ರಮಾಣಕ್ಕೆ ಒಳಗಾಗಬಹುದಾದ ಆ ಪ್ರಧಾನ ಕೊಳವೆಯಿಂದ ಯಾವುದೇ ಆವರಣಕ್ಕೆ ನೀರನ್ನು ಸರಬರಾಜು ಮಾಡುವುದಕ್ಕಾಗಿ ಹಾಕಿರುವ ಯಾವುದೇ ಪೈಪಿನ ಅಷ್ಟು ಭಾಗ;

(22) 'ಗ್ರಾಮಸಾರ' ಎಂದರೆ ಮಲ ಮತ್ತು ಕಕ್ಕಸ್ಸು, ಮೂತ್ರಿಗಳು, ರೊಚ್ಚುಗುಂಡಿಗಳು ಅಥವಾ ಚರಂಡಿಗಳ ಇತರ ಒಳಾಂಶಗಳು ಮತ್ತು ತೊಟ್ಟಿ, ಬಚ್ಚಲು ಮನೆಗಳು, ಲಾಯಗಳು, ದನದ ಕೊಟ್ಟಿಗೆಗಳು ಮತ್ತು ಅಂಥವೇ ಇತರ ಸ್ಥಳಗಳಿಂದ ಬರುವ ಮಲಿನಗೊಂಡ ನೀರು ಮತ್ತು ಇದು ಕಾರ್ಖಾನೆಯ ಕಲ್ಮಶ ಪ್ರವಾಹಗಳು ಮತ್ತು ಎಲ್ಲಾ ಬಗೆಯ ಕಾರ್ಖಾನೆಗಳಿಂದ ಹೊರಬಿಟ್ಟವುಗಳನ್ನು ಒಳಗೊಳ್ಳುತ್ತದೆ;

(23) 'ಗ್ರಾಮಸಾರ ಚರಂಡಿ' ಎಂದರೆ ಗ್ರಾಮಸಾರ, ಹೊಲಸು ಪದಾರ್ಥ, ಮಲಿನಗೊಂಡ ನೀರು, ಪೋಲಾದ ನೀರು ಅಥವಾ ಅಂತರ್ಜಲವನ್ನು ಹರಿಸುವುದಕ್ಕಾಗಿನ ಮುಚ್ಚಿದ ನಳಿಕೆ;

(24) 'ಷೆಡ್ಡು ' ಎಂದರೆ ಷೆಡ್ ಅಥವಾ ಆಸರೆಗಾಗಿ ನಿರ್ಮಿಸಿದ ಸಣ್ಣ ಅಥವಾ ತಾತ್ಕಾಲಿಕ ರಚನೆ;

(25) 'ಬೀದಿ' ಎಂಬುದು ಅದು ರಸ್ತೆಯೇ ಆಗಿರಲಿ ಅಥವಾ ಆಗಿಲ್ಲದಿರಲಿ ಮತ್ತು ನಿರ್ಮಿಸಿರಲಿ ಅಥವಾ ನಿರ್ಮಿಸಿಲ್ಲದೆ ಇರಲಿ ಯಾವುದರ ಮೇಲೆ ಸಾರ್ವಜನಿಕರು ದಾರಿಯ ಹಕ್ಕನ್ನು ಹೊಂದಿರುವರೋ ಆ ಯಾವುದೇ ದಾರಿ, ರಸ್ತೆ, ಓಣಿ, ಚೌಕ, ಅಂಗಳ, ಸಂದಿ, ಗಲ್ಲಿ, ಮಾರ್ಗವನ್ನೂ ಮತ್ತು ಯಾವುದೇ ಸೇತುವೆ ಅಥವಾ ಒಡ್ಡುದಾರಿಯ ಮೇಲಿನ ರಸ್ತೆದಾರಿ ಅಥವಾ ಕಾಲುದಾರಿಯನ್ನೂ ಸಹ ಒಳಗೊಳ್ಳುತ್ತದೆ;

(26) 'ಸರಬರಾಜು ಕೊಳವೆ ' ಎಂದರೆ ಸಂಪರ್ಕ ಕೊಳವೆಯಾಗಿಲ್ಲದೆ ಇರುವ ಯಾವುದೇ ಸರ್ವೀಸ್ ಪೈಪಿನ ಅಷ್ಟು ಭಾಗ;

(27) 'ಕಸಬು ಕಲ್ಮಶ' ಎಂದರೆ ಕಸಬಿನ ಆವರಣಗಳಲ್ಲಿ ಯಾವುದೇ ಕಸಬನ್ನು ಅಥವಾ ಉದ್ಯಮವನ್ನು ನಡೆಸುವಾಗ ಸಂಪೂರ್ಣವಾಗಿ ಅಥವಾ ಭಾಗಶಃ ಉತ್ಪನ್ನವಾದ ವಸ್ತುವಿನ ಕಣಗಳು ತೇಲುವ ಅಥವಾ ತೇಲದ, ಯಾವುದೇ ದ್ರವ ಮತ್ತು ಯಾವುದೇ ಕಸಬಿನ ಆವರಣಕ್ಕೆ ಸಂಬಂಧಪಟ್ಟಂತೆ, ಆ ಆವರಣಗಳಲ್ಲಿ ನಡೆಯುತ್ತಿರುವ ಕಸಬು ಅಥವಾ ಉದ್ಯಮದಲ್ಲಿ ಹಾಗೆ ಉತ್ಪನ್ನವಾದ ಮೇಲೆ ಹೇಳಿದಂಥ ಯಾವುದೇ ದ್ರವ, ಆದರೆ ಮನೆಯ ಗ್ರಾಮಸಾರವನ್ನು ಒಳಗೊಳ್ಳುವುದಿಲ್ಲ;

(28) 'ಕಸಬಿನ ಆವರಣ' ಎಂದರೆ ಯಾವುದೇ ವ್ಯಾಪಾರ ಅಥವಾ ಉದ್ಯಮವನ್ನು ನಡೆಸುವುದಕ್ಕಾಗಿ ಬಳಸಿದ ಅಥವಾ ಬಳಸಲು ಉದ್ದೇಶಿಸಿದ ಯಾವುದೇ ಆವರಣ;

(29) 'ಕಸಬಿನ ಕಸ ' ಎಂದರೆ ಯಾವುದೇ ಕಸಬಿನ ಅಥವಾ ಉದ್ಯಮದ ಕಸ;

(30) 'ಮುಖ್ಯ ಕೊಳವೆ ' ಎಂದರೆ ಒಂದು ಸರಬರಾಜು ಮೂಲದಿಂದ ಫಿಲ್ಟರಿಗೆ ಅಥವಾ ಜಲಾಶಯಕ್ಕೆ ಅಥವಾ ಒಂದು ಫಿಲ್ಟರಿನಿಂದ ಅಥವಾ ಜಲಾಶಯದಿಂದ ಮತ್ತೊಂದು ಫಿಲ್ಟರಿಗೆ ಅಥವಾ ಜಲಾಶಯಕ್ಕೆ ನೀರನ್ನು ಸಾಗಿಸುವ ಉದ್ದೇಶಕ್ಕಾಗಿ ಅಥವಾ ಸರಬರಾಜಿನ ಸರಹದ್ದುಗಳ ಒಂದು ಭಾಗದಿಂದ ಆ ಸರಹದ್ದುಗಳ ಮತ್ತೊಂದು ಭಾಗಕ್ಕೆ ಹೆಚ್ಚಾಗಿ ನೀರನ್ನು ಸಾಗಿಸುವ ಉದ್ದೇಶಕ್ಕಾಗಿ ಅಥವಾ ಹೆಚ್ಚಾಗಿ ನೀರಿನ ಸರಬರಾಜನ್ನು ಕೊಡುವ ಅಥವಾ ತೆಗೆದುಕೊಳ್ಳುವ ಉದ್ದೇಶಕ್ಕಾಗಿ ನಿರ್ಮಿಸಿದ ಪ್ರಧಾನ ಕೊಳವೆ;

(31) 'ವಾಹನ' ಎಂಬುದು ಸಾಗಣೆ ವಾಹನ, ಗಾಡಿ, ವ್ಯಾನ್, ಸಾಮಾನು ಬಂಡಿ, ಟ್ರಕ್ಕು, ಕೈಗಾಡಿ, ಬೈಸಿಕಲ್, ಸೈಕಲ್ ರಿಕ್ಷಾ, ಆಟೋರಿಕ್ಷಾ , ಮೋಟಾರು ವಾಹನ ಮತ್ತು ಬೀದಿಯ ಮೇಲೆ ಬಳಸುತ್ತಿರುವ ಅಥವಾ ಬಳಸಲು ಸಮರ್ಥವಾಗಿರುವಂಥ ಪ್ರತಿಯೊಂದು ಚಕ್ರಗಳನ್ನುಳ್ಳ ವಾಹನವನ್ನು ಒಳಗೊಳ್ಳುತ್ತದೆ;

(32) 'ಜಲಮಾರ್ಗ' ಎಂಬುದು ಯಾವುದೇ ನದಿ, ತೊರೆ ಅಥವಾ ಸ್ವಾಭಾವಿಕವಾದುದಾಗಿರಲಿ ಅಥವಾ ಕೃತಕವಾದುದಾಗಿರಲಿ ಕಾಲುವೆಯನ್ನು ಒಳಗೊಳ್ಳುತ್ತದೆ;

(33) 'ನೀರು ಜೋಡಣೆಗಳು' ಎಂಬುದು ಕೊಳವೆಗಳು, (ಪ್ರಧಾನ ಕೊಳವೆಗಳನ್ನು ಹೊರತುಪಡಿಸಿ) ಕೊಳಾಯಿಗಳು, ಬಿರುಡೆಗಳು, ಕವಾಟಗಳು, ಪಟ್ಟಿಗಳು, ಮೀಟರ್‌ಗಳು, ನೀರು ತೊಟ್ಟಿಗಳು, ಸ್ನಾನೋಪಕರಣಗಳು ಮತ್ತು ನೀರು ಸರಬರಾಜು ಮತ್ತು ಅದರ ಬಳಕೆಗೆ ಸಂಬಂಧಿಸಿದಂತೆ ಬಳಸುವ ಅಂಥವೇ ಇತರ ಸಲಕರಣೆಗಳು;

(34) 'ನೀರು ಸರಬರಾಜು ಇಂಜಿನಿಯರ್ ' ಎಂದರೆ ನೀರು ಸರಬರಾಜು ಇಂಜಿನಿಯರ್ ಆಗಿರಲು ಮಂಡಳಿಯು ನೇಮಕ ಮಾಡಿದ ಅಧಿಕಾರಿ, ಮತ್ತು ಇದು ನೀರು ಸರಬರಾಜು ಇಂಜಿನಿಯರನ ಕರ್ತವ್ಯಗಳ ಬಗ್ಗೆ ಹೆಚ್ಚಿನ ಪ್ರಭಾರದಲ್ಲಿ ಇಟ್ಟಿರುವ ಯಾವನೇ ಅಧಿಕಾರಿಯನ್ನು ಒಳಗೊಳ್ಳುತ್ತದೆ;

(35) 'ನೀರು ಸರಬರಾಜು ಗೃಹ ' ಎಂಬುದು ಎಲ್ಲಾ ದೊಡ್ಡ ಕೆರೆಗಳು, ಕೆರೆಗಳು, ತೊರೆಗಳು, ನೀರು ತೊಟ್ಟಿಗಳು, ಚಿಲುಮೆಗಳು, ಪಂಪ್‌ಗಳು, ಬಾವಿಗಳು, ಜಲಾಶಯಗಳು, ಮೇಲುಗಾಲುವೆಗಳು, ನೀರು ಟ್ರಕ್‌ಗಳು, ತೂಬುಗಳು, ಪ್ರಧಾನ ಕೊಳವೆಗಳು, ಕೊಳವೆಗಳು, ಅಡಿಗಾಲುವೆಗಳು, ನೀರೆತ್ತುವ ಕೊಳವೆಗಳು, ನಿಲುಗೊಳವೆಗಳು ಮತ್ತು ನಳಿಕೆಗಳು ಮತ್ತು ಎಲ್ಲಾ ಭೂಮಿಗಳು, ಕಟ್ಟಡಗಳು, ಯಂತ್ರ ಸಾಮಗ್ರಿ, ಸೇತುವೆಗಳು ಮತ್ತು ನೀರನ್ನು ಸರಬರಾಜು ಮಾಡುವುದಕ್ಕಾಗಿ ಬಳಸುವ ಅಥವಾ ಆ ಉದ್ದೇಶಗಳಿಗಾಗಿ ಗೊತ್ತು ಮಾಡಿದ ವಸ್ತುಗಳನ್ನು ಒಳಗೊಳ್ಳುತ್ತದೆ.

# ಅಧ್ಯಾಯ-II

## ಮಂಡಳಿಯ ಸ್ಥಾಪನೆ

**3. ಬೆಂಗಳೂರು ನೀರು ಸರಬರಾಜು ಮತ್ತು ಗ್ರಾಮಸಾರ ಚರಂಡಿ ವ್ಯವಸ್ಥಾ ಮಂಡಳಿಯ ರಚನೆ ಮತ್ತು ಸಂಯೋಜನೆ:-** (1) ರಾಜ್ಯ ಸರ್ಕಾರವು, ಈ ಅಧ್ಯಾಯವು ಪ್ರಾರಂಭವಾದ ತರುವಾಯ ಸಾಧ್ಯವಾದಷ್ಟು ಬೇಗನೆ ರಾಜ್ಯಪತ್ರದಲ್ಲಿ ಅಧಿಸೂಚನೆಯ ಮೂಲಕ "ಬೆಂಗಳೂರು ನೀರು ಸರಬರಾಜು ಮತ್ತು ಗ್ರಾಮಸಾರ ಚರಂಡಿ ವ್ಯವಸ್ಥಾ ಮಂಡಳಿ" ಎಂಬ ಹೆಸರಿನ ಮಂಡಳಿಯನ್ನು ರಚಿಸತಕ್ಕದು.

(2) ಆ ಮಂಡಳಿಯು, ರಾಜ್ಯ ಸರ್ಕಾರವು ನೇಮಕ ಮಾಡಿದ ಮೂವರಿಗಿಂತ ಕಡಿಮೆಯಿಲ್ಲದ ಮತ್ತು ಏಳಕ್ಕಿಂತ ಹೆಚ್ಚಿಲ್ಲದ ಸದಸ್ಯರನ್ನು ಒಳಗೊಂಡಿರತಕ್ಕುದು.

(3) ಆ ಸದಸ್ಯರಲ್ಲಿ -

(ಎ) ಒಬ್ಬನು, ವಾಣಿಜ್ಯ ವಿಷಯಗಳು ಮತ್ತು ಆಡಳಿತದಲ್ಲಿ ಅನುಭವವನ್ನು ಹೊಂದಿರುವ ಮತ್ತು ಸಾಮರ್ಥ್ಯವುಳ್ಳ ವ್ಯಕ್ತಿಯಾಗಿರತಕ್ಕುದು;

(ಬಿ) ಒಬ್ಬನು, [1][ಸಿವಿಲ್ ಇಂಜಿನಿಯರಿಂಗ್ ಕಾಮಗಾರಿಗಳಲ್ಲಿ ಅದರಲ್ಲಿಯೂ ನೀರು ಸರಬರಾಜು, ಚರಂಡಿ ಮತ್ತು ಗ್ರಾಮಸಾರ ವಿಲೆ ಮತ್ತು ಕೈಗಾರಿಕಾ ಕಸಗಳಿಗೆ ಸಂಬಂಧಪಟ್ಟಂತೆ ಸಾರ್ವಜನಿಕ ಆರೋಗ್ಯ ಇಂಜಿನಿಯರಿಂಗ್ ಕ್ಷೇತ್ರದಲ್ಲಿ ವ್ಯಾಪಕ ಅನುಭವವನ್ನು ಹೊಂದಿರುವ ವ್ಯಕ್ತಿಯಾಗಿರತಕ್ಕುದು][1]; ಮತ್ತು

(ಸಿ) ಒಬ್ಬನು, ಸಾರ್ವಜನಿಕ ಉಪಯುಕ್ತತಾ ಉದ್ಯಮದಲ್ಲಿ ಅದರಲ್ಲೂ ನೀರು ಸರಬರಾಜು ಅಥವಾ ಗ್ರಾಮಸಾರ ವಿಲೆ ಉದ್ಯಮದಲ್ಲಿ ಲೆಕ್ಕ ಮತ್ತು ಹಣಕಾಸಿನ ವಿಷಯಗಳಲ್ಲಿ ಅನುಭವವನ್ನು ಹೊಂದಿರುವ ವ್ಯಕ್ತಿಯಾಗಿರತಕ್ಕುದು.

(4) (3)ನೇ ಉಪ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಯಾವುದೇ ಅರ್ಹತೆಯನ್ನು ಹೊಂದಿರುವ ಒಬ್ಬ ಸದಸ್ಯನನ್ನು ಮಂಡಳಿಯ ಅಧ್ಯಕ್ಷನಾಗಿರಲು ರಾಜ್ಯ ಸರ್ಕಾರವು ನೇಮಕ ಮಾಡತಕ್ಕುದು.

(5) ವ್ಯಕ್ತಿಯು, ಅವನು ಸಂಸತ್ತಿನ ಅಥವಾ ಯಾವುದೇ ರಾಜ್ಯ ವಿಧಾನಮಂಡಲದ ಅಥವಾ ಯಾವುದೇ ಸ್ಥಳೀಯ ಪ್ರಾಧಿಕಾರದ ಸದಸ್ಯನಾಗಿದ್ದರೆ ಅಥವಾ ನಿಕಟ ಪೂರ್ವದ ಹನ್ನೆರಡು ತಿಂಗಳುಗಳ ಒಳಗೆ ಹಾಗೆ ಇದ್ದಿದ್ದರೆ ಮಂಡಳಿಯ ಸದಸ್ಯನಾಗಿ ನೇಮಕಗೊಳ್ಳುವುದಕ್ಕೆ ಅಥವಾ ಸದಸ್ಯನಾಗಿರಲು ಅನರ್ಹನಾಗಿರತಕ್ಕುದು.

(6) ಮಂಡಳಿಯು ಮಾಡಿದ ಯಾವುದೇ ಕಾರ್ಯವನ್ನು, ಆ ಮಂಡಲಿಯಲ್ಲಿ ಯಾವುದೇ ಖಾಲಿ ಸ್ಥಾನವು ಇರುವುದು ಅಥವಾ ಅದರ ರಚನೆಯಲ್ಲಿ ದೋಷ ಇರುವ ಕಾರಣದಿಂದಲೇ ಪ್ರಶ್ನಿಸತಕ್ಕುದಲ್ಲ.

**4. ಪದಾವಧಿ ಮತ್ತು ಮಂಡಳಿಯ ಸದಸ್ಯರ ಮರು ನೇಮಕಾತಿಗಾಗಿ ಷರತ್ತುಗಳು:-** ಮಂಡಳಿಯ ಅಧ್ಯಕ್ಷ ಮತ್ತು ಇತರ ಸದಸ್ಯರು ನಿಯಮಗಳ ಮೂಲಕ ನಿಯಮಿಸಬಹುದಾದಂಥ ಅವಧಿಗಾಗಿ ಪದಧಾರಣ ಮಾಡತಕ್ಕುದು ಮತ್ತು ಅಂಥ ಷರತ್ತುಗಳ ಮೇರೆಗೆ ಮರುನೇಮಕಾತಿಗಾಗಿ ಅರ್ಹನಾಗಿರತಕ್ಕುದು.

**5. [1][ಮಂಡಳಿಯ ಸದಸ್ಯನಾಗುವುದಕ್ಕಾಗಿ ಅನರ್ಹತೆಗಳು][1] :-** [1][(1) ಒಬ್ಬ ವ್ಯಕ್ತಿಯು, ಇಲ್ಲಿ ಇನ್ನು ಮುಂದೆ ಉಪಬಂಧಿಸಿರುವಂತೆ ಹೊರತು ಮಂಡಳಿಯ ಆದೇಶದ ಮೂಲಕ ಮಾಡಿದ ಯಾವುದೇ ಕಾಮಗಾರಿಯಲ್ಲಿ ಅಥವಾ ಮಂಡಳಿಯೊಂದಿಗಿನ ಅಥವಾ ಅದರ ಅಡಿಯಲ್ಲಿ ಅಥವಾ ಮೂಲಕ ಅಥವಾ ಅದರ ಪರವಾಗಿ ಮಾಡಿಕೊಂಡ ಯಾವುದೇ ಕರಾರಿನಲ್ಲಿ ಅಥವಾ ನಿಯೋಜನೆಯಲ್ಲಿ ಅವನು ಸ್ವತಃ ನೇರವಾಗಿ ಅಥವಾ ಪರೋಕ್ಷವಾಗಿ ಅಥವಾ ಅವನ ಪಾಲುದಾರನ ಮೂಲಕ ಯಾವುದೇ ಹಿಸ್ಸೆ ಅಥವಾ ಹಿತಾಸಕ್ತಿಯನ್ನು ಹೊಂದಿದ್ದರೆ, ಮಂಡಳಿಯ ಸದಸ್ಯನಾಗಿ ನೇಮಕಗೊಳ್ಳುವುದಕ್ಕಾಗಿ ಅನರ್ಹನಾಗಿರತಕ್ಕುದು.][1]

(2) (1)ನೇ ಉಪ ಪ್ರಕರಣದಲ್ಲಿ ಇರುವುದು ಯಾವುದೂ, ಸದಸ್ಯನು ಯಾವುದೇ ಫರ್ಮು ಅಥವಾ ಕಂಪನಿಯಲ್ಲಿ ಯಾವುದೇ ಹಿಸ್ಸೆ ಅಥವಾ ಹಿತಾಸಕ್ತಿಯನ್ನು ಅರ್ಜಿಸಲು ಅಥವಾ ಹೊಂದಲು ಪ್ರತಿಬಂಧಿಸತಕ್ಕುದಲ್ಲ [2][xxx][2]:

ಪರಂತು, ಮಂಡಳಿಯು, ಯಾವ ಫರ್ಮು ಅಥವಾ ಕಂಪನಿಯಲ್ಲಿ ಸದಸ್ಯನು, ಯಾವುದೇ ಹಿಸ್ಸೆ ಅಥವಾ ಹಿತಾಸಕ್ತಿಯನ್ನು ಹೊಂದಿರುವನೋ ಆ ಫರ್ಮು ಅಥವಾ ಕಂಪನಿಯೊಡನೆ ಯಾವುದೇ ಕರಾರು ಅಥವಾ ಒಪ್ಪಂದವನ್ನು ಮಾಡಿಕೊಂಡಿದ್ದರೆ ಅಥವಾ ಇನ್ನೇನು ಮಾಡಿಕೊಳ್ಳುವುದಿದ್ದರೆ, ಅವನು ಆ ಸಂಗತಿಯನ್ನು ಅಥವಾ ಅಂಥ ಹಿತಾಸಕ್ತಿಯ ಸ್ವರೂಪವನ್ನು ಬಹಿರಂಗಪಡಿಸತಕ್ಕುದು ಮತ್ತು ಅವನು, ಅಂಥ ಕರಾರು ಅಥವಾ ಒಪ್ಪಂದಕ್ಕೆ ಸಂಬಂಧಪಟ್ಟಂತೆ ಮಂಡಳಿಯ ಯಾವುದೇ ತೀರ್ಮಾನದ ಬಗ್ಗೆ ಮತದಾನಮಾಡಲು ಹಕ್ಕುಳ್ಳವನಾಗಿರತಕ್ಕುದಲ್ಲ.

(3) (2)ನೇ ಉಪಪ್ರಕರಣದ ಪರಂತುಕದಲ್ಲಿ ಹೇಳಿರುವವುಗಳನ್ನು ಬಹಿರಂಗಪಡಿಸಿರುವುದನ್ನು ತಕ್ಷಣ ಮಂಡಳಿಯ ನಡವಳಿಕೆಗಳಲ್ಲಿ ದಾಖಲು ಮಾಡತಕ್ಕುದು ಮತ್ತು ಅದನ್ನು ರಾಜ್ಯ ಸರ್ಕಾರಕ್ಕೆ ತಿಳಿಸತಕ್ಕುದು ಮತ್ತು ರಾಜ್ಯ ಸರ್ಕಾರವು ಆ ತರುವಾಯ ಅದು ಯುಕ್ತವೆಂದು ಭಾವಿಸಬಹುದಾದಂಥ ನಿರ್ದೇಶನವನ್ನು ಕೊಡಬಹುದು.

---

1. 1966ರ ಅಧಿನಿಯಮ ಸಂಖ್ಯೆ 6ರ ಮೂಲಕ 17.3.1966 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
2. 1966ರ ಅಧಿನಿಯಮ ಸಂಖ್ಯೆ 6ರ ಮೂಲಕ 17.3.1966 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

**6. ಸದಸ್ಯರನ್ನು ತೆಗೆದುಹಾಕುವುದು ಅಥವಾ ಅಮಾನತ್ತುಗೊಳಿಸುವುದು :-**

(1) ರಾಜ್ಯ ಸರ್ಕಾರವು ಮಂಡಲಿಯ ಯಾವನೇ ಸದಸ್ಯನನ್ನು, ಅವನು-

(ಎ) ಅಸ್ವಸ್ಥ ಚಿತ್ತದವನಾಗಿದ್ದರೆ ಮತ್ತು ಅವನನ್ನು ಸಕ್ಷಮ ನ್ಯಾಯಾಲಯವು ಹಾಗೆಂದು ಘೋಷಿಸಿದ್ದರೆ; ಅಥವಾ

(ಬಿ) ಅವಿಮುಕ್ತ ದಿವಾಳಿಯಾಗಿದ್ದರೆ; ಅಥವಾ

[1][(ಸಿ) 5ನೇ ಪ್ರಕರಣದ (1)ನೇ ಉಪಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಯಾವುದೇ ಅನರ್ಹತೆಗೆ ಒಳಪಟ್ಟಿದ್ದರೆ;][1]

(ಡಿ) ಸಂಸತ್ತು ಅಥವಾ ರಾಜ್ಯವಿಧಾನಮಂಡಲ ಅಥವಾ ಯಾವುದೇ ಸ್ಥಳೀಯ ಪ್ರಾಧಿಕಾರದ ಸದಸ್ಯನಾದರೆ ಅಥವಾ ಸದಸ್ಯನಾಗಲು ಕೋರಿದ್ದರೆ; ಅಥವಾ

(ಇ) ರಾಜ್ಯ ಸರ್ಕಾರದ ಅಭಿಪ್ರಾಯದಲ್ಲಿ -

(i) ಕಾರ್ಯನಿರ್ವಹಿಸಲು ನಿರಾಕರಿಸಿದರೆ; ಅಥವಾ

(ii) ಕಾರ್ಯನಿರ್ವಹಿಸಲು ಅಸಮರ್ಥನಾಗಿದ್ದರೆ; ಅಥವಾ

(iii) ಮಂಡಳಿಯಲ್ಲಿ ಅವನು ಮುಂದುವರಿಯುವುದು ಸಾರ್ವಜನಿಕ ಹಿತದೃಷ್ಟಿಗಳಿಗೆ ಬಾಧಕವಾಗುತ್ತದೆನ್ನುವಷ್ಟರ ಮಟ್ಟಿಗೆ ತನ್ನ ಸದಸ್ಯ ಸ್ಥಾನವನ್ನು ದುರುಪಯೋಗಪಡಿಸಿಕೊಂಡಿದ್ದರೆ; ಅಥವಾ

(iv) ಸದಸ್ಯನಾಗಿ ಮುಂದುವರಿಯಲು ಅನ್ಯಥಾ ಅಯೋಗ್ಯನಾಗಿದ್ದರೆ; ಅಥವಾ

(ಎಫ್) ನೈತಿಕ ಪತನವನ್ನೊಳಗೊಳ್ಳುವ ಅಪರಾಧದ ಬಗ್ಗೆ ಅಪರಾಧಿ ಎಂದು ನಿರ್ಣೀತನಾಗಿದ್ದರೆ

- ಸೂಕ್ತವೆಂದು ತಾನು ಯೋಚಿಸುವಂಥ ಅವಧಿಗಾಗಿ ಪದದಿಂದ ಅಮಾನತುಗೊಳಿಸಬಹುದು ಅಥವಾ ಪದದಿಂದ ತೆಗೆದುಹಾಕಬಹುದು.

(2) ರಾಜ್ಯ ಸರ್ಕಾರವು, ಯಾವನೇ ಸದಸ್ಯನನ್ನು, ಅವನ ವಿರುದ್ಧ ವಿಚಾರಣೆಯು ಇತ್ಯರ್ಥದಲ್ಲಿರುವಾಗ ಅಮಾನತುಗೊಳಿಸಬಹುದು.

(3) ಯಾವುದೇ ಆದೇಶ ಅಥವಾ ತೆಗೆದುಹಾಕುವಿಕೆಯ ಬಗೆಗಿನ ಯಾವುದೇ ಆದೇಶವನ್ನು ಸಂಬಂಧಪಟ್ಟ ಸದಸ್ಯನಿಗೆ, ರಾಜ್ಯ ಸರ್ಕಾರಕ್ಕೆ ಅವನ ವಿವರಣೆಯನ್ನು ಒಪ್ಪಿಸಲು ಅವಕಾಶವನ್ನು ಕೊಟ್ಟಿದ್ದ ಹೊರತು ಈ ಪ್ರಕರಣದ ಮೇರೆಗೆ ಮಾಡತಕ್ಕುದಲ್ಲ ಮತ್ತು ಅಂಥ ಆದೇಶವನ್ನು ಮಾಡಿದಾಗ ತೆಗೆದುಹಾಕಿದ ಸದಸ್ಯನ ಸ್ಥಾನವು ಖಾಲಿಯಾಗತಕ್ಕುದು ಮತ್ತು ಆ ಖಾಲಿ ಸ್ಥಾನವನ್ನು ಭರ್ತಿ ಮಾಡಲು 3ನೇ ಪ್ರಕರಣದ ಮೇರೆಗೆ ಇನ್ನೊಬ್ಬ ಸದಸ್ಯನನ್ನು ನೇಮಕ ಮಾಡಬಹುದು.

(4) ತೆಗೆದುಹಾಕಲಾಗಿರುವ ಸದಸ್ಯನು, ಸದಸ್ಯನಾಗಿ ಅಥವಾ ಮಂಡಳಿಗೆ ಯಾವುದೇ ಇತರ ಸ್ಥಾನಮಾನದಲ್ಲಿ ಮರುನೇಮಕಾತಿಗಾಗಿ ಅರ್ಹನಾಗಿರತಕ್ಕುದಲ್ಲ.

(5) ಆ ಮಂಡಳಿಯು ಅದರ ಪ್ರಕಾರ್ಯಗಳನ್ನು ಕಾರ್ಯಗತಗೊಳಿಸಲು ತಪ್ಪಿದರೆ ಅಥವಾ [1][89ನೇ ಪ್ರಕರಣದ ಮೇರೆಗೆ ರಾಜ್ಯಸರ್ಕಾರವು ಹೊರಡಿಸಿದ ನಿರ್ದೇಶನಗಳನ್ನು][1] ಅನುಸರಿಸಲು ನಿರಾಕರಿಸಿದರೆ ಅಥವಾ ತಪ್ಪಿದರೆ, ರಾಜ್ಯ ಸರ್ಕಾರವು, ಮಂಡಳಿಯ ಅಧ್ಯಕ್ಷನನ್ನು ಮತ್ತು ಸದಸ್ಯರನ್ನು ತೆಗೆದುಹಾಕಬಹುದು ಮತ್ತು ಅವರ ಸ್ಥಾನಗಳಲ್ಲಿ ಅಧ್ಯಕ್ಷ ಮತ್ತು ಸದಸ್ಯರನ್ನು ನೇಮಕ ಮಾಡಬಹುದು.

**7. ಕೆಲವು ವ್ಯವಹಾರಗಳನ್ನು ಅನೂರ್ಜಿತವೆಂದು ಘೋಷಿಸಲು ರಾಜ್ಯ ಸರ್ಕಾರದ ಅಧಿಕಾರಗಳು :- (1)** ರಾಜ್ಯ ಸರ್ಕಾರವು, ಈ ಬಗ್ಗೆ ಅದು ನಾಮನಿರ್ದೇಶನ ಮಾಡಿದ ಜಿಲ್ಲಾ ನ್ಯಾಯಾಧೀಶನು ಆ ಪ್ರಕರಣದ ಸಂಗತಿಗಳ ಬಗ್ಗೆ ಮಾಡಿದ ವರದಿಯನ್ನು ಪರ್ಯಾಲೋಚಿಸಿದ ತರುವಾಯ 6ನೇ ಪ್ರಕರಣದ (1)ನೇ ಉಪಪ್ರಕರಣದ (ಇ) ಖಂಡದ [2][XXX][2]ಮೇರೆಗೆ ಯಾವ ವ್ಯವಹಾರಕ್ಕೆ ಸಂಬಂಧಿಸಿದಂತೆ ಸದಸ್ಯನನ್ನು ತೆಗೆದುಹಾಕಲಾಗಿದೆಯೋ ಆ ಯಾವುದೇ ವ್ಯವಹಾರವನ್ನು ಅನೂರ್ಜಿತವೆಂದು ಘೋಷಿಸಬಹುದು.

(2) (1)ನೇ ಉಪಪ್ರಕರಣದ ಮೇರೆಗೆ ನಾಮನಿರ್ದೇಶನ ಮಾಡಿದ ಜಿಲ್ಲಾ ನ್ಯಾಯಾಧೀಶನು, ಯಾವುದೇ ವ್ಯವಹಾರಕ್ಕೆ ಸಂಬಂಧಪಟ್ಟಂತೆ ರಾಜ್ಯ ಸರ್ಕಾರಕ್ಕೆ ಆ ಉಪಪ್ರಕರಣದ ಮೇರೆಗೆ ಅವನ ವರದಿಯನ್ನು ಕೊಡುವುದಕ್ಕೆ ಮುಂಚೆ, ಆ ವ್ಯವಹಾರದಲ್ಲಿ ಹಿತಾಸಕ್ತಿಯನ್ನು ಹೊಂದಿರುವ ಎಲ್ಲಾ ಪಕ್ಷಕಾರರಿಗೆ ಅಹವಾಲನ್ನು ಹೇಳಿಕೊಳ್ಳಲು ಯುಕ್ತ ಅವಕಾಶವನ್ನು ಕೊಡತಕ್ಕುದು.

(3) ಈ ಪ್ರಕರಣದ ಮೇರೆಗೆ ವ್ಯವಹಾರವನ್ನು ಅನೂರ್ಜಿತವೆಂದು ಘೋಷಿಸಿರುವಲ್ಲಿ, ಆ ವ್ಯವಹಾರಕ್ಕೆ ಪಕ್ಷಕಾರರಾಗಿರುವ ಯಾರೇ ಪಕ್ಷಕಾರನು ಆ ವ್ಯವರಹಾರನ್ನು ಜಾರಿಗೊಳಿಸತಕ್ಕುದಲ್ಲ, ಆದರೆ ಭಾರತ ಕರಾರು ಅಧಿನಿಯಮ, 1872ರ 65ನೇ ಪ್ರಕರಣದ ಉಪಬಂಧಗಳು ಅನೂರ್ಜಿತವಾಗಬೇಕಾದುದೆಂದು ಕಂಡು ಬಂದಿರುವಂಥ ಒಪ್ಪಂದಕ್ಕೆ ಅಥವಾ ಅನೂರ್ಜಿತವಾಗುವಂಥ ಕರಾರಿಗೆ ಅವು ಅನ್ವಯವಾಗುವ ಹಾಗೆ ಸಾಧ್ಯವಾಗಬಹುದಾದಷ್ಟರ ಮಟ್ಟಿಗೆ ಅಂಥ ವ್ಯವಹಾರಕ್ಕೆ ಅನ್ವಯವಾಗತಕ್ಕುದು.

(4) ಈ ಪ್ರಕರಣದ ಮೇರೆಗೆ ಯಾವುದೇ ವ್ಯವಹಾರವನ್ನು ಅನೂರ್ಜಿತವೆಂದು ಘೋಷಿಸುವ ರಾಜ್ಯಸರ್ಕಾರದ ತೀರ್ಮಾನವು ಅಂತಿಮವಾಗಿರತಕ್ಕುದು ಮತ್ತು ಅದನ್ನು ಯಾವುದೇ ನ್ಯಾಯಾಲಯದಲ್ಲಿ ಪ್ರಶ್ನಿಸತಕ್ಕುದಲ್ಲ.

1. 1966ರ ಅಧಿನಿಯಮ ಸಂಖ್ಯೆ 6ರ ಮೂಲಕ 17.3.1966 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

2. 1966ರ ಅಧಿನಿಯಮ ಸಂಖ್ಯೆ 6ರ ಮೂಲಕ 17.3.1966 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

**8. ಸದಸ್ಯರ ತಾತ್ಕಾಲಿಕ ಗೈರುಹಾಜರಿ :–** ಮಂಡಳಿಯ ಅಧ್ಯಕ್ಷನು ಅಥವಾ ಯಾವನೇ ಇತರ ಸದಸ್ಯನು ಅಶಕ್ತತೆಯಿಂದಾಗಿ ಅಥವಾ ಅನ್ಯಥಾ ಅವನ ಕರ್ತವ್ಯಗಳನ್ನು ನಿರ್ವಹಿಸಲು ತಾತ್ಕಾಲಿಕವಾಗಿ ಅಸಮರ್ಥನಾದರೆ ಅಥವಾ ರಜೆಯ ಮೇಲೆ ಅಥವಾ ಅನ್ಯಥಾ ಅವನ ನೇಮಕಾತಿಯನ್ನು ತೆರವು ಮಾಡುವುದನ್ನು ಒಳಗೊಳ್ಳದ ಸಂದರ್ಭಗಳಲ್ಲಿ, ಗೈರುಹಾಜರಾದರೆ, ರಾಜ್ಯ ಸರ್ಕಾರವು, ಅವನ ಸ್ಥಾನದಲ್ಲಿ ಕಾರ್ಯ ನಿರ್ವಹಿಸಲು ಮತ್ತು ಈ ಅಧಿನಿಯಮ ಅಥವಾ ಅದರ ಮೇರೆಗೆ ರಚಿಸಿದ ಯಾವುದೇ ನಿಯಮ ಅಥವಾ ವಿನಿಯಮದ ಮೇರೆಗಿನ ಅವನ ಪ್ರಕಾರ್ಯಗಳನ್ನು ನಿರ್ವಹಿಸಲು ಮತ್ತೊಬ್ಬ ವ್ಯಕ್ತಿಯನ್ನು ನೇಮಕ ಮಾಡಬಹುದು.

**9. ಮಂಡಳಿಯ ನಿಗಮನ :–** (1) ಈ ಅಧಿನಿಯಮದ ಉಪಬಂಧಗಳಿಗೆ ಮತ್ತು ಅದರ ಮೇರೆಗೆ ರಚಿಸಿದ ನಿಯಮಗಳಿಗೊಳಪಟ್ಟು ಚರ ಮತ್ತು ಸ್ಥಿರಾಸ್ತಿಗಳೆರಡನ್ನು ಆರ್ಜಿಸುವ ಮತ್ತು ಧಾರಣಮಾಡುವ ಮತ್ತು ವಿಲೆ ಮಾಡುವ ಅಧಿಕಾರದೊಂದಿಗೆ, ಮಂಡಳಿಯು, ಶಾಶ್ವತ ಉತ್ತಾರಾಧಿಕಾರವನ್ನು ಮತ್ತು ಸಾಮಾನ್ಯ ಮೊಹರನ್ನು ಹೊಂದಿರುವ ನಿಗಮಿತ ನಿಕಾಯವಾಗಿರತಕ್ಕುದು ಮತ್ತು ಅದು ಸದರಿ ಹೆಸರಿನ ಮೂಲಕ ದಾವೆಯನ್ನು ಹೂಡತಕ್ಕುದು ಮತ್ತು ದಾವೆಗೆ ಗುರಿಯಾಗತಕ್ಕುದು.

(2) ಈ ಅಧಿನಿಯಮದ ಮತ್ತು ಭೂ ಆರ್ಜನಾ ಅಧಿನಿಯಮ, 1894ರ ಉದ್ದೇಶಗಳಿಗಾಗಿ ಆ ಮಂಡಳಿಯು ಒಂದು ಸ್ಥಳೀಯ ಪ್ರಾಧಿಕಾರವಾಗಿರುವುದಾಗಿ ಭಾವಿಸತಕ್ಕುದು.

**10. ಮಂಡಳಿಯ ಆದೇಶಗಳು ಮತ್ತು ಇತರ ಲಿಖಿತಗಳ ಅಧಿಪ್ರಮಾಣೀಕರಣ :–** ಮಂಡಳಿಯ ಎಲ್ಲಾ ಆದೇಶಗಳು ಮತ್ತು ತೀರ್ಮಾನಗಳನ್ನು ಅಧ್ಯಕ್ಷನು ಅಥವಾ ಈ ಬಗ್ಗೆ ಮಂಡಳಿಯು ಅಧಿಕೃತಗೊಳಿಸಿದ ಯಾವನೇ ಇತರ ಸದಸ್ಯನು ರುಜು ಮಾಡುವ ಮೂಲಕ ಅಧಿಪ್ರಮಾಣೀಕರಿಸತಕ್ಕುದು ಮತ್ತು ಮಂಡಳಿಯು ಹೊರಡಿಸಿದ ಎಲ್ಲಾ ಇತರ ಲಿಖಿತಗಳನ್ನು, ಈ ಬಗ್ಗೆ ಅದೇ ರೀತಿಯಲ್ಲಿ ಅಧಿಕೃತಗೊಳಿಸಬಹುದಾದಂಥ ಸದಸ್ಯನು ಅಥವಾ ಮಂಡಳಿಯ ಅಧಿಕಾರಿಯು ರುಜುವನ್ನು ಮಾಡುವ ಮೂಲಕ ಅಧಿಪ್ರಮಾಣೀಕರಿಸತಕ್ಕುದು.

**11. ಮಂಡಳಿಯ ಸಭೆಗಳು :–** (1) ಮಂಡಳಿಯು ವಿನಿಯಮಗಳಲ್ಲಿ ಉಪಬಂಧಿಸಬಹುದಾದಂಥ ಮಧ್ಯಂತರಗಳಲ್ಲಿ ಸಾಮಾನ್ಯ ಸಭೆಗಳನ್ನು ನಡೆಸತಕ್ಕುದು ಮತ್ತು ತುರ್ತು ವ್ಯವಹಾರವನ್ನು ನಡೆಸುವುದಕ್ಕಾಗಿ ಯಾವುದೇ ಇತರ ಕಾಲದಲ್ಲಿ ಅಧ್ಯಕ್ಷನು ಸಭೆಯನ್ನು ಕರೆಯಬಹುದು.

(2) ಸಭೆಯಲ್ಲಿ ಕೋರಂ ಅನ್ನು ರೂಪಿಸಲು ಅವಶ್ಯವಾದ ಸದಸ್ಯರ ಸಂಖ್ಯೆಯು ವಿನಿಯಮಗಳಲ್ಲಿ ಉಪಬಂಧಿಸಬಹುದಾದಂಥದು ಆಗಿರತಕ್ಕುದು.

**12. ಸಿಬ್ಬಂದಿಯ ನೇಮಕಾತಿ:–** ಮಂಡಳಿಯು, ಒಬ್ಬ ಕಾರ್ಯದರ್ಶಿ, ಒಬ್ಬ ಮುಖ್ಯ ಇಂಜಿನಿಯರ್, ಒಬ್ಬ ಸ್ಯಾನಿಟರಿ ಇಂಜಿನಿಯರ್, ಒಬ್ಬ ನೀರು ಸರಬರಾಜು ಇಂಜಿನಿಯರ್ ಮತ್ತು ಈ ಅಧಿನಿಯಮದ ಮೇರೆಗೆ ಅದರ ಪ್ರಕಾರ್ಯಗಳನ್ನು ನಿರ್ವಹಿಸಲು ಮಂಡಳಿಗೆ ಸಾಧ್ಯವಾಗುವಂತೆ ಅಗತ್ಯವಾಗಬಹುದಾದಂಥ ಇತರ ಅಧಿಕಾರಿಗಳು ಮತ್ತು ನೌಕರರನ್ನು ನೇಮಕ ಮಾಡಬಹುದು:

ಪರಂತು, ಕಾರ್ಯದರ್ಶಿ, ಮುಖ್ಯ ಇಂಜಿನಿಯರ್, ಸ್ಯಾನಿಟರಿ ಇಂಜಿನಿಯರ್ ಮತ್ತು ನೀರು ಸರಬರಾಜು ಇಂಜಿನಿಯರ್ ಇವರ ನೇಮಕಾತಿಯನ್ನು ರಾಜ್ಯ ಸರ್ಕಾರದೊಂದಿಗೆ ಸಮಾಲೋಚಿಸಿದ ತರುವಾಯ ಮಾಡತಕ್ಕುದು.

**13. [1][ಸಮಾಲೋಚಕರ][1] ನೇಮಕಾತಿ :–** ಮಂಡಳಿಯು, ಕಾಲಕಾಲಕ್ಕೆ [1][ವಿನಿಯಮಗಳ][1] ಮೂಲಕ ನಿಯಮಿಸಬಹುದಾದಂಥ ಷರತ್ತುಗಳಿಗೆ ಒಳಪಟ್ಟು ಮಂಡಳಿಗೆ [1][ಸಮಾಲೋಚಕ][1]ರಾಗಿರಲು ಅರ್ಹ ವ್ಯಕ್ತಿಗಳನ್ನು ನೇಮಕ ಮಾಡಬಹುದು ಮತ್ತು ಅವರಿಗೆ ಅದು ಸೂಕ್ತವೆಂದು ಯೋಚಿಸಬಹುದಾದಂಥ ಸಂಭಾವನೆಯನ್ನು ಸಂದಾಯ ಮಾಡಬಹುದು.

**14. ಸಮಾಲೋಚನಾ ಸಮಿತಿ :–** (1) ರಾಜ್ಯ ಸರ್ಕಾರವು ಸೂಕ್ತವೆಂದು ಯೋಚಿಸುವಂತೆ ತಾನು ಈ ಕೆಳಕಂಡ ಹಿತಾಸಕ್ತಿಗಳನ್ನು ಪ್ರತಿನಿಧಿಸುವ ಅಂಥ ಪ್ರತಿನಿಧಿಗಳು ಅಥವಾ ನಿಕಾಯಗಳು, ಎಂದರೆ ಬೆಂಗಳೂರು ನಗರ ಪೌರ ನಿಗಮ: ಬೆಂಗಳೂರು ನಗರಾಭಿವೃದ್ಧಿ ನ್ಯಾಸ ಮಂಡಳಿ ಮತ್ತು ನೀರಿನ ಬಳಕೆದಾರರು ಇವರೊಡನೆ ಸಮಾಲೋಚಿಸಿದ ತರುವಾಯ ರಾಜ್ಯ ಸರ್ಕಾರವು ಮಂಡಲಿಯ ಸದಸ್ಯರು ಮತ್ತು ಮೂವರಿಗಿಂತ ಕಡಿಮೆ ಇಲ್ಲದಂತೆ ಮತ್ತು ಒಂಭತ್ತಕ್ಕಿಂತ ಹೆಚ್ಚಿಲ್ಲದಂಥ ಇತರ ವ್ಯಕ್ತಿಗಳನ್ನೊಳಗೊಂಡ ಸಮಾಲೋಚಕ ಸಮಿತಿಯನ್ನು ರಚಿಸತಕ್ಕುದು.

(2) ಮಂಡಳಿಯ ಅಧ್ಯಕ್ಷನು ಸಮಾಲೋಚನಾ ಸಮಿತಿಯ ಪದನಿಮಿತ್ತ ಅಧ್ಯಕ್ಷನಾಗಿರತಕ್ಕುದು.

(3) ಸಮಾಲೋಚನಾ ಸಮಿತಿಯು ಕನಿಷ್ಠ ಪಕ್ಷ ಮೂರು ತಿಂಗಳಿಗೊಮ್ಮೆ ಸಭೆ ಸೇರತಕ್ಕುದು.

(4) ಸಮಾಲೋಚನಾ ಸಮಿತಿಯ ಪ್ರಕಾರ್ಯಗಳು ಈ ಕೆಳಕಂಡಂತೆ ಇರತಕ್ಕುದು:-

(i) ಕಾರ್ಯನೀತಿ ಮತ್ತು ಮುಖ್ಯ ಯೋಜನೆಗಳ ಮುಖ್ಯ ಸಮಸ್ಯೆಗಳ ಬಗ್ಗೆ ಮಂಡಳಿಗೆ ಸಲಹೆ ಕೊಡುವುದು;

(ii) ಕಾಲಕಾಲಕ್ಕೆ ಮಂಡಳಿಯ ಕಾರ್ಯ ಪ್ರಗತಿ ಮತ್ತು ಕೆಲಸವನ್ನು ಪುನರ್ ಅವಲೋಕಿಸುವುದು;

(iii) ಮಂಡಳಿಯು ಅದರ ಮುಂದೆ ಇಡಬಹುದಾದಂಥ ವಿಷಯಗಳನ್ನು ಪರ್ಯಾಲೋಚಿಸುವುದು; ಮತ್ತು

(iv) ರಾಜ್ಯ ಸರ್ಕಾರವು ನಿಯಮಗಳ ಮೂಲಕ ನಿಯಮಿಸಬಹುದಾದಂಥ ವಿಷಯಗಳನ್ನು ಪರ್ಯಾಲೋಚಿಸುವುದು.

---

1. 1966ರ ಅಧಿನಿಯಮ ಸಂಖ್ಯೆ 6ರ ಮೂಲಕ 17.3.1966 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(5) ಮಂಡಳಿಯು, ಸಮಾಲೋಚನಾ ಸಮಿತಿಯ ಮುಂದೆ ವಾರ್ಷಿಕ ಹಣಕಾಸು ವಿವರಪತ್ರ ಮತ್ತು ಪೂರಕ ವಿವರಪತ್ರ ಯಾವುದಾದರೂ ಇದ್ದರೆ, ಅದನ್ನು ಅಂಥ ವಿವರ ಪತ್ರವನ್ನು 17ನೇ ಪ್ರಕರಣದ ಮೇರೆಗೆ ವರದಿ ಮತ್ತು ವ್ಯವಹರಣೆಗಳ ಪ್ರತಿಗಳೊಂದಿಗೆ ರಾಜ್ಯ ಸರ್ಕಾರಕ್ಕೆ ಒಪ್ಪಿಸುವುದಕ್ಕೆ ಮುಂಚೆ ಇಡತಕ್ಕುದು.

**15. ಮಂಡಳಿಯ ಸಾಮಾನ್ಯ ಕರ್ತವ್ಯಗಳು :- (1)** ಬೆಂಗಳೂರು ಮಹಾನಗರ ಪ್ರದೇಶದಲ್ಲಿ ನೀರು ಸರಬರಾಜನ್ನು ಒದಗಿಸುವುದು ಮತ್ತು ಈಗ ಇರುವ ನೀರು ಸರಬರಾಜನ್ನು ಸುಧಾರಿಸುವುದು ಮತ್ತು ಬೆಂಗಳೂರು ಮಹಾನಗರ ಪ್ರದೇಶದಲ್ಲಿ ಚರಂಡಿಗಾಗಿ ಮತ್ತು ಗ್ರಾಮಸಾರದ ವಿಲೆಗಾಗಿ ಸಾಕಷ್ಟು ವ್ಯವಸ್ಥೆಯನ್ನು ಮಾಡುವ ಸಾಮಾನ್ಯ ಕರ್ತವ್ಯದ ಜವಾಬ್ದಾರಿಯನ್ನು ಮಂಡಳಿಯು ಹೊಂದಿರತಕ್ಕುದು ಮತ್ತು ಮಂಡಳಿಯು, ಅಂಥ ಕರ್ತವ್ಯವನ್ನು ದಕ್ಷತೆಯಿಂದ ನಿರ್ವಹಿಸುವುದಕ್ಕಾಗಿ ಈ ಅಧಿನಿಯಮದ ಮೂಲಕ ಅಥವಾ ಅದರ ಮೇರೆಗೆ ಪ್ರಧಾನ ಮಾಡಿರುವಂಥ ಅಧಿಕಾರಗಳನ್ನು ಚಲಾಯಿಸತಕ್ಕುದು ಅಥವಾ ವಿಧಿಸಿರುವಂಥ ಪ್ರಕಾರ್ಯಗಳನ್ನು ನೆರವೇರಿಸತಕ್ಕುದು.

(2) (1)ನೇ ಉಪ ಪ್ರಕರಣದ ಉಪಬಂಧಗಳಿಗೆ ಬಾಧಕವಾಗದಂತೆ, -

(ಎ) ಬೆಂಗಳೂರು ಮಹಾನಗರ ಪ್ರದೇಶದಲ್ಲಿ ನೀರು ಸರಬರಾಜಿನ ಪರ್ಯಾಪ್ತತೆ ಮತ್ತು ಅದು ಆರೋಗ್ಯಕರವಾಗಿರುವ ಬಗ್ಗೆ ಸುನಿಶ್ಚಿತಪಡಿಸಿಕೊಳ್ಳುವುದಕ್ಕಾಗಿ;

(ಬಿ) ಬೆಂಗಳೂರು ಮಹಾನಗರ ಪ್ರದೇಶದೊಳಗೆ ಗೃಹಬಳಕೆಯ ಉದ್ದೇಶಗಳಿಗಾಗಿ ಆರೋಗ್ಯಕರವಾದ ನೀರು ಸರಬರಾಜಿಗಾಗಿ [1][XXX][1] ಯೋಜನೆಗಳನ್ನು ತಯಾರಿಸುವುದು ಮತ್ತು ಕಾರ್ಯಗತಗೊಳಿಸುವುದಕ್ಕಾಗಿ ;

(ಸಿ) ಬೆಂಗಳೂರು ಮಹಾನಗರ ಪ್ರದೇಶದಲ್ಲಿ ಸೂಕ್ತ ಚರಂಡಿ ವ್ಯವಸ್ಥೆಗಾಗಿ ಮತ್ತು ಗ್ರಾಮಸಾರದ ವಿಲೆಗಾಗಿ ಯೋಜನೆಗಳನ್ನು ತಯಾರಿಸುವುದು ಮತ್ತು ಕಾರ್ಯಗತಗೊಳಿಸುವುದಕ್ಕಾಗಿ [1][XXX][1]

- ಕಾಲಕಾಲಕ್ಕೆ ಕ್ರಮಗಳನ್ನು ಕೈಗೊಳ್ಳುವುದು ಮಂಡಳಿಯ ಕರ್ತವ್ಯವಾಗಿರತಕ್ಕುದು :

[2][ಪರಂತು, ಒಂದು ಕೋಟಿ ರೂಪಾಯಿಗಳಿಗಿಂತ ಹೆಚ್ಚಿನ ಅಂದಾಜು ಖರ್ಚಿನ (ಬಿ) ಅಥವಾ (ಸಿ) ಖಂಡದ ಮೇರೆಗಿನ ಯಾವುದೇ ಯೋಜನೆಯನ್ನು ರಾಜ್ಯ ಸರ್ಕಾರದ ಅನುಮೋದನೆಯ ಹೊರತು ಮಂಡಲಿಯು ಕಾರ್ಯಗತಗೊಳಿಸತಕ್ಕುದಲ್ಲ.][2]

(3) 2ನೇ ಉಪಪ್ರಕರಣದ (ಬಿ) ಖಂಡದ ಮೇರೆಗಿನ ಯೋಜನೆಯು ಇತರ ವಿಷಯಗಳ ಜೊತೆಗೆ, -

(ಎ) ಮನೆಗಳಿರುವಂಥ ಬೆಂಗಳೂರು ಮಹಾನಗರ ಪ್ರದೇಶದ ಪ್ರತಿಯೊಂದು ಭಾಗಕ್ಕೆ ಮನೆಗಳಲ್ಲಿ ವಾಸವಾಗಿರುವ ಬಳಕೆಯ ಉದ್ದೇಶಗಳಿಗಾಗಿ ಕೊಳವೆಗಳಲ್ಲಿ ಆರೋಗ್ಯಕರವಾದ ನೀರಿನ ಸರಬರಾಜಿಗಾಗಿ, ಮತ್ತು ಮನೆಗಳಿಗೆ ಸಾಧ್ಯವಾಗುವಂತಹ ಅಂಥ ಜಾಗ ಅಥವಾ ಜಾಗಗಳಿಗೆ ಕೊಳವೆಗಳನ್ನು ಒಯ್ಯುವುದಕ್ಕಾಗಿ ವ್ಯವಸ್ಥೆಯನ್ನು ಮಾಡತಕ್ಕುದು, ಆದಾಗ್ಯೂ, ಈ ಖಂಡವು ಯುಕ್ತ ಖರ್ಚಿನಲ್ಲಿ ಕಾರ್ಯಸಾಧ್ಯವಾಗದಿರುವಂಥ ಯಾವುದೇ ಕಾರ್ಯವನ್ನು ಮಾಡಲು ಅಥವಾ ಹಿಂದೆ ಹೇಳಿದ ಅಂಥ ಜಾಗ ಅಥವಾ ಜಾಗಗಳಲ್ಲಿ ಈಗಾಗಲೇ ಅಂಥ ಸರಬರಾಜು ಲಭ್ಯವಿರುವಲ್ಲಿ ಬೆಂಗಳೂರು ಮಹಾನಗರ ಪ್ರದೇಶದ ಯಾವುದೇ ಭಾಗಕ್ಕೆ ಅಂಥ ಸರಬರಾಜನ್ನು ಒದಗಿಸಲು ಆ ಮಂಡಳಿಯನ್ನು ಅಗತ್ಯಪಡಿಸತಕ್ಕುದಲ್ಲ;

(ಬಿ) ಮನೆಗಳಿರುವಂಥ ಬೆಂಗಳೂರು ಮಹಾನಗರ ಪ್ರದೇಶದ ಪ್ರತಿಯೊಂದು ಭಾಗದಲ್ಲಿ ಅಲ್ಲಿ ವಾಸವಾಗಿರುವವರ ಗೃಹಬಳಕೆಯ ಉದ್ದೇಶಗಳಿಗಾಗಿ ಕೊಳವೆಗಳಲ್ಲಿ ಅಲ್ಲದೆ ಅನ್ಯಥಾ, ಮತ್ತು ಯಾವ ಭಾಗಕ್ಕೆ ಯುಕ್ತ ಖರ್ಚಿನಲ್ಲಿ ಕೊಳವೆಗಳಲ್ಲಿ ಸರಬರಾಜು ಮಾಡುವುದು ಕಾರ್ಯಸಾಧ್ಯವಿಲ್ಲವೋ ಆ ಭಾಗಕ್ಕೆ ಮತ್ತು ಯಾವ ಭಾಗದಲ್ಲಿ ಸರಬರಾಜು ಸಾಲದಿರುವುದರಿಂದ ಅಥವಾ ಈಗ ಸರಬರಾಜಾಗುತ್ತಿರುವ ನೀರು ಅನಾರೋಗ್ಯಕರದಾಗಿರುವುದರಿಂದ ಆರೋಗ್ಯಕ್ಕೆ ಅಪಾಯ ಉಂಟಾಗುವುದೋ ಮತ್ತು ಸಾರ್ವಜನಿಕ ಸರಬರಾಜು ಅಗತ್ಯವಾಗಿದೆಯೋ ಮತ್ತು ಅದನ್ನು ಯುಕ್ತ ಖರ್ಚಿನಲ್ಲಿ ಒದಗಿಸಲು ಸಾಧ್ಯವಿದೆಯೋ ಹಾಗೆ ಸಾಧ್ಯವಾದ ಮಟ್ಟಿಗೆ ಆರೋಗ್ಯಕರ ನೀರಿನ ಸರಬರಾಜಿಗಾಗಿ ಮತ್ತು ಆ ಭಾಗದಲ್ಲಿರುವ ಪ್ರತಿಯೊಂದು ಮನೆಯ ಯುಕ್ತ ದೂರುದೊಳಗೆ ಅಂಥ ಸರಬರಾಜು ಲಭ್ಯವಿರುವುದನ್ನು ಸುನಿಶ್ಚಿತಗೊಳಿಸುವುದಕ್ಕಾಗಿ

- ವ್ಯವಸ್ಥೆಯನ್ನು ಮಾಡತಕ್ಕುದು.

(4) (3)ನೇ ಉಪಪ್ರಕರಣದ (ಎ) ಖಂಡದ ಮೇರೆಗೆ ಯಾವುದೇ ಕಾರ್ಯವು ಯುಕ್ತ ಖರ್ಚಿನಲ್ಲಿ ಕಾರ್ಯಸಾಧ್ಯವಿದೆಯೋ ಅಥವಾ ಇಲ್ಲವೋ ಎಂಬ ಬಗ್ಗೆ ಅಥವಾ ಯುಕ್ತ ಖರ್ಚಿನಲ್ಲಿ ಮನೆಗಳಿಗೆ ಕೊಳವೆಗಳನ್ನು ಜೋಡಿಸಲು ಸಾಧ್ಯವಾಗುವಂತೆ ಅವುಗಳನ್ನು ಯಾವ ಹಂತ ಅಥವಾ ಹಂತಗಳಿಗೆ ಒಯ್ಯತಕ್ಕುದು ಎಂಬ ಬಗ್ಗೆ ಅಥವಾ ಸದರಿ ಉಪಪ್ರಕರಣದ (ಬಿ) ಖಂಡದ ಮೇರೆಗೆ, ಯುಕ್ತ ಖರ್ಚಿನಲ್ಲಿ ಸಾರ್ವಜನಿಕ ಸರಬರಾಜನ್ನು ಒದಗಿಸಲು ಸಾಧ್ಯವೇ ಎಂಬ ಬಗ್ಗೆ ಯಾವುದೇ ಪ್ರಶ್ನೆಯು ಉದ್ಭವಿಸಿದರೆ, ರಾಜ್ಯ ಸರ್ಕಾರವು ಆ ಪ್ರಶ್ನೆಯನ್ನು ನಿರ್ಧರಿಸತಕ್ಕುದು ಮತ್ತು ಆ ತರುವಾಯ ಆ ಮಂಡಳಿಯು ಆ ನಿರ್ಧರಣೆಯನ್ನು ಜಾರಿಗೊಳಿಸತಕ್ಕುದು.

(5) (1), (2) ಮತ್ತು (3)ನೇ ಉಪಪ್ರಕರಣಗಳ ಉಪಬಂಧಗಳಿಗೆ ಬಾಧಕವಾಗದಂತೆ ಮಂಡಳಿಯು, ಯುಕ್ತವಾಗಿ ಕಾರ್ಯಸಾಧ್ಯವಾಗುವಷ್ಟರ ಮಟ್ಟಿಗೆ ಗೃಹ ಬಳಕೆಯ ಉದ್ದೇಶಗಳಿಗಾಗಿ ಪ್ರತಿಯೊಂದು ಮನೆಗೆ ಸಾಕಷ್ಟು ಆರೋಗ್ಯಕರವಾದ ನೀರಿನ ಸರಬರಾಜು ಆಗುವುದನ್ನು ಸುನಿಶ್ಚಿತಗೊಳಿಸುವ ಉದ್ದೇಶಕ್ಕಾಗಿ, ಮನೆಗಳ ಒಡೆಯರನ್ನು, ಅವುಗಳಿಗೆ ನೀರಿನ ಸರಬರಾಜನ್ನು ಒದಗಿಸಲು ಅಗತ್ಯಪಡಿಸಿ ಈ ಅಧಿನಿಯಮದ ಮೇರೆಗಿನ ಅದರ ಅಧಿಕಾರಗಳನ್ನು ಚಲಾಯಿಸತಕ್ಕುದು.

---

1. 1966ರ ಅಧಿನಿಯಮ ಸಂಖ್ಯೆ 6ರ ಮೂಲಕ 17.3.1966 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

2. 1966ರ ಅಧಿನಿಯಮ ಸಂಖ್ಯೆ 6ರ ಮೂಲಕ 17.3.1966 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

## ಅಧ್ಯಾಯ-III

### ಮಂಡಳಿಯ ಹಣಕಾಸು ಲೆಕ್ಕಪತ್ರಗಳು ಮತ್ತು ಲೆಕ್ಕಪರಿಶೋಧನೆ

[1][**16. ಮಂಡಳಿಯ ಹಣಕಾಸಿನ ಸಾಮಾನ್ಯ ತತ್ವಗಳು:-** (1) ಈ ಅಧಿನಿಯಮದ ಮೇರೆಗಿನ ಅದರ ಕಾರ್ಯಾಚರಣೆಗಳನ್ನು ನಡೆಸುವುದಕ್ಕಾಗಿ ಮಂಡಳಿಯು ದರಗಳು, ಫೀಜುಗಳು, ಬಾಡಿಗೆ ಮೊತ್ತಗಳು ಮತ್ತು ಇತರ ವೆಚ್ಚಗಳನ್ನು ವಿಧಿಸತಕ್ಕುದು, ಮತ್ತು -

(ಎ) ಕಾರ್ಯಾಚರಣಾ ವೆಚ್ಚಗಳು, ತೆರಿಗೆಗಳು ಮತ್ತು ಬಡ್ಡಿ ಸಂದಾಯಗಳನ್ನು ಭರಿಸಲು ಮತ್ತು ಸಾಕಷ್ಟು ನಿರ್ವಹಣೆ ಮತ್ತು ಇಳಿತಾಯಗಳಿಗಾಗಿ ವ್ಯವಸ್ಥೆ ಮಾಡಲು;

(ಬಿ) ಸಾಲಗಳು ಮತ್ತು ಇತರ ಕಡಗಳ ಮರುಸಂದಾಯಗಳನ್ನು ಭರಿಸಲು ;

(ಸಿ) ವರ್ಷದಿಂದ ವರ್ಷಕ್ಕೆ ಆಗುವ ಸಾಮಾನ್ಯ ಅಭಿವೃದ್ಧಿಗಳಿಗಾಗಿ ಹಣಕಾಸು ಒದಗಿಸಲು; ಮತ್ತು

(ಡಿ) ಮಂಡಳಿಯು ನಿರ್ಧರಿಸಬಹುದಾದಂತೆ ಬೆಂಗಳೂರು ಮಹಾನಗರ ಪ್ರದೇಶದಲ್ಲಿ ನೀರು ಸರಬರಾಜು ಮತ್ತು ಗ್ರಾಮಸಾರದ ವಿಲೆ ಮಾಡಲು ಅಂಥ ಇತರ ಪ್ರಯೋಜನಕಾರಿ ಉದ್ದೇಶಗಳಿಗಾಗಿ ವ್ಯವಸ್ಥೆಯನ್ನು ಮಾಡಲು, -

- ಸಾಕಷ್ಟು ಹುಟ್ಟುವಳಿಯನ್ನು ಒದಗಿಸುವ ದೃಷ್ಟಿಯಿಂದ ಕಾಲಕಾಲಕ್ಕೆ ಅಂಥ ದರಗಳು, ಫೀಜುಗಳು, ಬಾಡಿಗೆ ಮೊತ್ತಗಳು ಮತ್ತು ಇತರ ವೆಚ್ಚಗಳನ್ನು ಮಾರ್ಪಡಿಸತಕ್ಕುದು.

(2) (1)ನೇ ಉಪಪ್ರಕರಣದ (ಎ), (ಬಿ) ಮತ್ತು (ಸಿ) ಖಂಡಗಳಲ್ಲಿ ಉಲ್ಲೇಖಿಸಿದ ವೆಚ್ಚಗಳನ್ನು ಭರಿಸಿದ ತರುವಾಯ, ಮಂಡಳಿಯ ಹುಟ್ಟುವಳಿಗಳ ಯಾವುದೇ ಭಾಗವನ್ನು, 24 ಮತ್ತು 24-ಎ ಪ್ರಕರಣಗಳಲ್ಲಿ ಉಲ್ಲೇಖಿಸಿದ ಮೀಸಲುಗಳನ್ನು ಹೊರತುಪಡಿಸಿ ಮಂಡಳಿಯ ಇತರ ಮೀಸಲುಗಳನ್ನು ಹೆಚ್ಚಿಸಲು ಅಥವಾ ಅಭಿವೃದ್ಧಿ ಕಾಮಗಾರಿಗಳನ್ನು ಹೊರತುಪಡಿಸಿ, ಇತರ ಬಂಡವಾಳ ಕಾಮಗಾರಿಗಳಿಗೆ ಸಂಬಂಧಿಸಿದ ವೆಚ್ಚಗಳನ್ನೂ ಒಳಗೊಂಡು ಮಂಡಳಿಯ ಸಾಮಾನ್ಯ ಉದ್ದೇಶಗಳಿಗಾಗಿ ಬಳಸತಕ್ಕುದಲ್ಲ.][1]

**17. ವಾರ್ಷಿಕ ಹಣಕಾಸು ವಿವರ ಪತ್ರ :-** (1) ಪ್ರತಿ ವರ್ಷದ ಫೆಬ್ರವರಿಯಲ್ಲಿ ಮಂಡಳಿಯು, [1][ವಿನಿಯಮಗಳ][1] ಮೂಲಕ ನಿಯಮಿಸಿದ ನಮೂನೆಯಲ್ಲಿ ಮುಂಬರುವ ವರ್ಷಕ್ಕಾಗಿನ ಅಂದಾಜು ಬಂಡವಾಳ ಮತ್ತು ಆದಾಯ ಜಮೆಗಳು ಮತ್ತು ವೆಚ್ಚಗಳ ವಿವರಪತ್ರವನ್ನು ರಾಜ್ಯ ಸರ್ಕಾರಕ್ಕೆ ಒಪ್ಪಿಸತಕ್ಕುದು.

(2) ಸದರಿ ವಿವರ ಪತ್ರವು, ಮಂಡಳಿಯ ಸದಸ್ಯರು, ಅಧಿಕಾರಿಗಳು ಮತ್ತು ನೌಕರರ ಸಂಬಳಗಳು ಮತ್ತು ನಿಯಮಗಳ ಮೂಲಕ ನಿಯಮಿಸಬಹುದಾದಂಥ ಇತರ ತಪಶೀಲುಗಳ ವಿವರ ಪತ್ರವನ್ನು ಒಳಗೊಂಡಿರತಕ್ಕುದು.

(3) ರಾಜ್ಯ ಸರ್ಕಾರವು, ಸದರಿ ವಿವರ ಪತ್ರವನ್ನು ಸ್ವೀಕರಿಸಿದ ತರುವಾಯ ಆದಷ್ಟು ಬೇಗನೆ ಅದನ್ನು ರಾಜ್ಯ ವಿಧಾನಮಂಡಲದ ಎರಡೂ ಸದನಗಳ ಮುಂದೆ ಇಡುವಂತೆ ಮಾಡತಕ್ಕುದು, ಮತ್ತು ಸದರಿ ವಿವರಪತ್ರವು ಅದರ ಬಗ್ಗೆ ಚರ್ಚೆಗೆ ಮುಕ್ತವಾಗಿರತಕ್ಕುದು, ಆದರೆ ಅದು ಮತದಾನಕ್ಕೆ ಒಳಪಡತಕ್ಕುದಲ್ಲ.

(4) ಮಂಡಳಿಯು, ರಾಜ್ಯ ವಿಧಾನಮಂಡಲದಲ್ಲಿ ಸದರಿ ವಿವರಪತ್ರದ ಬಗ್ಗೆ ಮಾಡಿದ ಯಾವುದೇ ಟೀಕೆಗಳನ್ನು ಪರ್ಯಾಲೋಚನೆಗೆ ತೆಗೆದುಕೊಳ್ಳತಕ್ಕುದು.

(5) ಮಂಡಲಿಯು, ಯಾವ ವರ್ಷಕ್ಕೆ ಸಂಬಂಧಿಸಿದಂತೆ (1)ನೇ ಉಪ ಪ್ರಕರಣದ ಮೇರೆಗೆ ವಿವರಪತ್ರವನ್ನು ಒಪ್ಪಿಸಿದೆಯೋ ಆ ವರ್ಷದಲ್ಲಿ ಯಾವುದೇ ಕಾಲದಲ್ಲಿ ರಾಜ್ಯ ಸರ್ಕಾರಕ್ಕೆ ಒಂದು ಪೂರಕ ವಿವರಪತ್ರವನ್ನು ಒಪ್ಪಿಸಬಹುದು ಮತ್ತು ಈ ಪ್ರಕರಣದ ಎಲ್ಲಾ ಉಪಬಂಧಗಳು ಅಂಥ ವಿವರಪತ್ರಕ್ಕೆ ಸದರಿ ಉಪಪ್ರಕರಣದ ಮೇರೆಗಿನ ವಿವರಪತ್ರಕ್ಕೆ ಅವು ಅನ್ವಯವಾಗುವ ಹಾಗೆ ಅನ್ವಯವಾಗತಕ್ಕುದು.

**18. ಆಯವ್ಯಯಪತ್ರದಲ್ಲಿ ಸೇರಿಸಿಲ್ಲದ ವೆಚ್ಚದ ಮೇಲೆ ನಿರ್ಬಂಧ :-** (1) ಅತಿ ತುರ್ತು ಸಂದರ್ಭಗಳು ಉದ್ಭವಿಸಿವೆ ಎಂದು ಮಂಡಳಿಯು ಅಭಿಪ್ರಾಯಪಟ್ಟಿರುವ ಹೊರತು, 17ನೇ ಪ್ರಕರಣದ (1)ನೇ ಉಪ ಪ್ರಕರಣ ಅಥವಾ (5)ನೇ ಉಪಪ್ರಕರಣದ ಮೇರೆಗೆ ಒಪ್ಪಿಸಿದ ವಿವರಪತ್ರದಲ್ಲಿ ಅಂಥ ಮೊತ್ತವನ್ನು ಸೇರಿಸಿರುವ ಹೊರತು ಯಾವುದೇ ಲೆಕ್ಕದ ವರ್ಷದಲ್ಲಿ ಮಂಡಳಿಯು, ಆವರ್ತಕ ವೆಚ್ಚದ ನಿಮಿತ್ತ [1][ಒಂದು ಲಕ್ಷ ರೂಪಾಯಿಗಳನ್ನು][1] ಮೀರಿ ಅಥವಾ ಅನಾವರ್ತಕ ವೆಚ್ಚದ ನಿಮಿತ್ತ [1][ಐದು ಲಕ್ಷ ರೂಪಾಯಿಗಳನ್ನು][1] ಮೀರಿ ಯಾವುದೇ ಮೊತ್ತವನ್ನು ವೆಚ್ಚಮಾಡತಕ್ಕುದಲ್ಲ.

(2) ಯಾವುದೇ ಅಂಥ ಮೊತ್ತವನ್ನು ಅತಿ ತುರ್ತು ಸಂದರ್ಭಗಳಲ್ಲಿ ವೆಚ್ಚ ಮಾಡಿರುವಲ್ಲಿ ಆ ವೆಚ್ಚವನ್ನು ಯಾವ ಮೂಲದಿಂದ ಭರಿಸಲು ಉದ್ದೇಶಿಸಲಾಗಿದೆ ಎಂಬುದನ್ನು ಸೂಚಿಸುವ ಆ ಬಗೆಗಿನ ವರದಿಯನ್ನು ಸಾಧ್ಯವಾದಷ್ಟು ಬೇಗ ಸರ್ಕಾರಕ್ಕೆ ಒಪ್ಪಿಸತಕ್ಕುದು.

**19. ಮಂಡಳಿಗೆ ಧನಸಹಾಯಗಳು:-** ರಾಜ್ಯ ಸರ್ಕಾರವು, ರಾಜ್ಯ ವಿಧಾನ ಮಂಡಲದ ಅನುಮೋದನೆಯೊಂದಿಗೆ, ರಾಜ್ಯ ಸರ್ಕಾರವು ನಿರ್ಧರಿಸಬಹುದಾದಂಥ ನಿಬಂಧನೆಗಳು ಮತ್ತು ಷರತ್ತುಗಳಿಗೆ ಒಳಪಟ್ಟು ಈ ಅಧಿನಿಯಮದ ಉದ್ದೇಶಗಳಿಗಾಗಿ ಮಂಡಳಿಗೆ ಕಾಲಕಾಲಕ್ಕೆ ಧನಸಹಾಯಗಳನ್ನು ಮಾಡಬಹುದು.

---

1. 1966 ರ ಅಧಿನಿಯಮ ಸಂಖ್ಯೆ 6ರ ಮೂಲಕ 17.3.1966 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

**20. ಮಂಡಳಿಗೆ ಸಾಲಗಳು :-** ರಾಜ್ಯ ಸರ್ಕಾರವು, ಈ ಅಧಿನಿಯಮದ ಉಪಬಂಧಗಳಿಗೆ ಅಸಂಗತವಾಗಿಲ್ಲದಂಥ ನಿರ್ಧರಿಸಬಹುದಾದ, ನಿಬಂಧನೆಗಳು ಮತ್ತು ಷರತ್ತುಗಳ ಮೇಲೆ ಕಾಲಕಾಲಕ್ಕೆ ಮಂಡಳಿಗೆ ಸಾಲಗಳನ್ನು ಕೊಡಬಹುದು.

**21. ಸಾಲ ತೆಗೆದುಕೊಳ್ಳಲು ಮಂಡಳಿಯ ಅಧಿಕಾರ :-** (1) ಮಂಡಳಿಯು, ರಾಜ್ಯ ಸರ್ಕಾರದ ಪೂರ್ವ ಮಂಜೂರಾತಿಯೊಂದಿಗೆ ಮತ್ತು ಈ ಅಧಿನಿಯಮದ ಉಪಬಂಧಗಳಿಗೆ ಮತ್ತು ಈ ಬಗ್ಗೆ ನಿಯಮಗಳ ಮೂಲಕ ನಿಯಮಿಸಬಹುದಾದಂಥ ಷರತ್ತುಗಳಿಗೆ ಒಳಪಟ್ಟು ಕಾಲಕಾಲಕ್ಕೆ ಈ ಅಧಿನಿಯಮದ ಉದ್ದೇಶಗಳಿಗಾಗಿ ಅಗತ್ಯವಾದ ಯಾವುದೇ ಮೊತ್ತವನ್ನು ಸಾಲವಾಗಿ ಪಡೆದುಕೊಳ್ಳಬಹುದು.

(2) ಈ ಪ್ರಕರಣದ ಉದ್ದೇಶಗಳಿಗಾಗಿ, ರಾಜ್ಯ ಸರ್ಕಾರವು ರಚಿಸಿದ ನಿಯಮಗಳು, ಬಂಧಪತ್ರಗಳು ಅಥವಾ ಸ್ಟಾಕ್‌ಗಳನ್ನು ಹೊರಡಿಸುವ ಮೂಲಕ ಅಥವಾ ಅನ್ಯಥಾ ಸಾಲಪಡೆಯಲು ಮತ್ತು ಬ್ಯಾಂಕರ್‌ಗಳ ಜೊತೆ ಏರ್ಪಾಟುಗಳನ್ನು ಮಾಡಿಕೊಳ್ಳಲು ಮಂಡಳಿಯನ್ನು ಅಧಿಕೃತಗೊಳಿಸಬಹುದು.

(3) ಮಂಡಳಿಯು, ಯಾವುದೇ ಕಾಲದಲ್ಲಿ (1)ನೇ ಉಪ ಪ್ರಕರಣದ ಮೇರೆಗೆ ಸಾಲವಾಗಿ ಪಡೆಯಬಹುದಾದಂಥ ಗರಿಷ್ಠ ಮೊಬಲಗು, ರಾಜ್ಯ ಸರ್ಕಾರವು, ಅಧಿಸೂಚನೆಯ ಮೂಲಕ ಇನ್ನು ಹೆಚ್ಚಿನ ಗರಿಷ್ಠ ಮೊಬಲಗನ್ನು ನಿಗದಿಪಡಿಸುವ ಹೊರತು, ಹತ್ತು ಕೋಟಿ ರೂಪಾಯಿಗಳು ಆಗಿರತಕ್ಕುದು.

(4) ಈ ಪ್ರಕರಣದ ಮೇರೆಗೆ ಮಂಡಳಿಯು ಹೊರಡಿಸುವ ಸ್ಟಾಕನ್ನು, ನಿಯಮಗಳ ಮೂಲಕ ನಿಯಮಿಸಬಹುದಾದಂಥ ರೀತಿಯಲ್ಲಿ ಹೊರಡಿಸತಕ್ಕುದು, ವರ್ಗಾಯಿಸತಕ್ಕುದು, ಅದರೊಂದಿಗೆ ವ್ಯವಹರಿಸತಕ್ಕುದು ಮತ್ತು ಅದನ್ನು ವಿಮೋಚಿಸತಕ್ಕುದು.

**22. ಸಾಲಗಳ ಬಗ್ಗೆ ಖಾತರಿ:-** ರಾಜ್ಯಸರ್ಕಾರವು, ಅದು ಸೂಕ್ತವೆಂದು ಯೋಚಿಸಬಹುದಾದಂಥ ರೀತಿಯಲ್ಲಿ, ಮಂಡಳಿಯು ಎತ್ತಬೇಕೆಂದು ಪ್ರಸ್ತಾಪಿಸಿದ ಯಾವುದೇ ಸಾಲದ ಅಸಲು ಮತ್ತು ಬಡ್ಡಿಯ ಬಗ್ಗೆ ಅಥವಾ ಅಸಲು ಅಥವಾ ಬಡ್ಡಿಯನ್ನು ಸಂದಾಯ ಮಾಡುವುದರ ಬಗ್ಗೆ ಖಾತರಿಯನ್ನು ಕೊಡಬಹುದು:

ಪರಂತು, ರಾಜ್ಯ ಸರ್ಕಾರವು, ಅಂಥ ಯಾವುದೇ ಖಾತರಿಗಳು ಜಾರಿಯಲ್ಲಿರುವವರೆಗೆ, ರಾಜ್ಯದ ಚಾಲ್ತಿ ಹಣಕಾಸು ವರ್ಷದಲ್ಲಿ ಕೊಟ್ಟ ಖಾತರಿಗಳ ವಿವರಪತ್ರವು ಯಾವುದಾದರೂ ಇದ್ದರೆ ಅದನ್ನು ಮತ್ತು ಯಾವುದೇ ಅಂಥ ಖಾತರಿಗಳ ಕಾರಣದಿಂದಾಗಿ ರಾಜ್ಯದ ರಾಜಸ್ವಗಳಿಂದ ಸಂದಾಯ ಮಾಡಲಾಗಿರುವಂಥ ಅಥವಾ ಹಾಗೆ ಸಂದಾಯ ಮಾಡಿದ ಯಾವುದೇ ಹಣದ ಮರುಪಾವತಿಯ ಬಗ್ಗೆ ರಾಜ್ಯದ ರಾಜಸ್ವಕ್ಕೆ ಸಂದಾಯ ಮಾಡಿದ ಒಟ್ಟು ಮೊತ್ತಗಳ ತಹಲ್‌ವರೆಗಿನ ಲೆಕ್ಕವು, ಯಾವುದಾದರೂ ಇದ್ದರೆ, ಅದನ್ನು ಪ್ರತಿವರ್ಷ ಆಯವ್ಯಯ ಅಧಿವೇಶನದಲ್ಲಿ ರಾಜ್ಯ ವಿಧಾನಮಂಡಲದ ಎರಡೂ ಸದನಗಳ ಮುಂದೆ ಇಡತಕ್ಕುದು.

[1][**23.** x x x x][1]

**24. ಇಳಿತಾಯ ಮೀಸಲು :-** (1) ಮಂಡಳಿಯು, ಇಳಿತಾಯ ಮೀಸಲನ್ನು ಸೃಜಿಸತಕ್ಕುದು ಮತ್ತು [1][xxx][1]ಪ್ರತಿವರ್ಷದ ಕೊನೆಯಲ್ಲಿ ಅಂಥ ಮೀಸಲಿಗೆ ತನ್ನ ಆದಾಯದಿಂದ, ಈ ಅಧಿನಿಯಮದ ಅನುಸೂಚಿಗೆ ಲಗತ್ತಿಸಿದ ಕೋಷ್ಟಕದಲ್ಲಿ ನಿರ್ದಿಷ್ಟಪಡಿಸಿರುವ ಆಸ್ತಿಗಳನ್ನು ಸಂರಕ್ಷಿಸಿದ ಅವಧಿಯಂತೆ ಪೂರ್ತ ವರ್ಷವರ್ಷವೂ ಕೊಟ್ಟಿದ್ದಿದ್ದರೆ ಮತ್ತು ಪ್ರತಿವರ್ಷಕ್ಕೆ ಶೇಕಡಾ ಮೂರರ ದರದಲ್ಲಿ ಚಕ್ರಬಡ್ಡಿಯಂತೆ ಸಂಚಯವಾಗಿದ್ದಿದ್ದರೆ, ಮಂಡಳಿಯ ಪುಸ್ತಕಗಳಲ್ಲಿ ಈಗಾಗಲೇ ಲೆಕ್ಕದಿಂದ ತೆಗೆದುಹಾಕಿದ ಮತ್ತು ರದ್ದುಗೊಳಿಸಿದ ಮೊತ್ತಗಳನ್ನು ಗಣನೆಗೆ ತೆಗೆದುಕೊಂಡ ತರುವಾಯ ಆಸ್ತಿಗಳ ಮೂಲ ಬೆಲೆಯ ಶೇಕಡಾ ತೊಂಬತ್ತರಷ್ಟಕ್ಕೆ ಸಮನಾದ ಮೊಬಲಗನ್ನು ನಿಯಮಿಸಿದ ಅವಧಿಯ ಕೊನೆಯಲ್ಲಿ ಉತ್ಪಾದಿಸುವಂಥ ಮೊಬಲಗನ್ನು ಅಂಥ ಮೀಸಲಿಗೆ ಜಮೆ ಮಾಡತಕ್ಕುದು.

(2) (1)ನೇ ಉಪಪ್ರಕರಣದ ಮೇರೆಗೆ ಇಳಿತಾಯ ಮೀಸಲಿಗೆ ಪ್ರತಿವರ್ಷ ಜಮೆ ಮಾಡಬೇಕಾದ ಮೊಬಲಗು ಸಂವೃದ್ಧಿತ ಠೇವಣಿ ಮತ್ತು ಮೀಸಲಿನಲ್ಲಿನ ಸಂಚಿತ ಶಿಲ್ಕಿನ ಮೇಲಿನ ಬಡ್ಡಿಯನ್ನು ಒಳಗೊಂಡಿರತಕ್ಕುದು:

ಪರಂತು, ಈ ಪ್ರಕರಣದ ಮೇರೆಗಿನ ಇಳಿತಾಯ ಮೀಸಲಿಗೆ, ಯಾವುದೇ ಆಸ್ತಿಗೆ ಸಂಬಂಧಿಸಿದಂತೆ ಕೊಡಬೇಕಾದ ವಂತಿಗೆಯು [2][ವಿನಿಯಮಗಳ][2] ಮೂಲಕ ನಿಯಮಿಸಬಹುದಾದಂಥ ಅವಧಿಯ ಕೊನೆಯಲ್ಲಿ ಅಥವಾ ಮಂಡಳಿಯು ಆಸ್ತಿಯನ್ನು ಬಳಸುವುದು ನಿಂತುಹೋದಾಗ, ಇವುಗಳಲ್ಲಿ ಯಾವುದು ಮೊದಲಿನದೋ ಆಗ ನಿಂತುಹೋಗತಕ್ಕುದು.

[1][ಪರಂತುಕ ೦ ೦ ೦ ೦ ][1]

1. 1966 ಅಧಿನಿಯಮ ಸಂಖ್ಯೆ 6ರ ಮೂಲಕ 17.3.1966 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

2. 1966 ಅಧಿನಿಯಮ ಸಂಖ್ಯೆ 6ರ ಮೂಲಕ 17.3.1966 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

[1][**24ಎ. ಅಭಿವೃದ್ಧಿ ಮೀಸಲು :-** ಮಂಡಳಿಯು, ಅಭಿವೃದ್ಧಿ ಕಾಮಗಾರಿಗಳಿಗಾಗಿ ಮೀಸಲನ್ನು ಸೃಜಿಸತಕ್ಕದ್ದು ಮತ್ತು ಪ್ರತಿವರ್ಷದ ಕೊನೆಯಲ್ಲಿ ತನ್ನ ಆದಾಯದಿಂದ ಅಂಥ ಮೀಸಲಿಗೆ ಕಾರ್ಯಾಚರಣೆ, ನಿರ್ವಹಣೆ ಮತ್ತು ವ್ಯವಸ್ಥಾಪನಾ ವೆಚ್ಚಗಳನ್ನು ಭರಿಸಿದ ತರುವಾಯ ಮತ್ತು ಯಾವುದನ್ನು ಬೆಂಗಳೂರು ಮಹಾನಗರ ಪ್ರದೇಶದಲ್ಲಿ ಸಾಕಷ್ಟು ನೀರು ಸರಬರಾಜು ಮತ್ತು ಗ್ರಾಮಸಾರ ವಿಲೆಯ ಸೇವೆಗಳನ್ನು ಒದಗಿಸುವುದಕ್ಕಾಗಿ ಮಂಡಳಿಯು ಕಾರ್ಯಗತಗೊಳಿಸಬೇಕಾಗಿದೆಯೋ ಆ ಅಭಿವೃದ್ಧಿ ಕಾಮಗಾರಿಗಳನ್ನು ಪರ್ಯಾಲೋಚಿಸಿ ಮಂಡಲಿಯು ನಿರ್ಧರಿಸಬಹುದಾದಂತೆ ಇಳಿತಾಯ, ತೆರಿಗೆಗಳು ಮತ್ತು ಸಾಲಗಳು ಮತ್ತು ಇತರ ಕಡಗಳ ಮೇಲಿನ ಬಡ್ಡಿಗೆ ಮತ್ತು ಕ್ರಮೇಣ ಮರುಪಾವತಿ ಮಾಡುವಂಥವುಗಳಿಗಾಗಿ ಸಾಕಷ್ಟು ವ್ಯವಸ್ಥೆಯನ್ನು ಮಾಡಿದ ತರುವಾಯ ಉಳಿಯುವ ಶಿಲ್ಕಿನ ಅಂಥ ಶೇಕಡಾವಾರನ್ನು ಜಮೆ ಮಾಡತಕ್ಕದ್ದು.

**24ಬಿ. ಸರ್ಕಾರಕ್ಕೆ ಬಡ್ಡಿಯ ಸಂದಾಯ :-** ಈ ಅಧಿನಿಯಮದ ಉಪಬಂಧಗಳ ಕಾರಣದಿಂದಾಗಿ ಮಂಡಳಿಯಲ್ಲಿ ನಿಹಿತವಾಗುವಂಥ ಸರ್ಕಾರದ ಆಸ್ತಿಗಳಿಗೆ ಸಂಬಂಧಿಸಿದಂತೆ ಮಂಡಳಿಯು, ಮಂಡಳಿಯೊಂದಿಗೆ ಸಮಾಲೋಚಿಸಿ ಸರ್ಕಾರವು ಕಾಲಕಾಲಕ್ಕೆ ನಿಗದಿಪಡಿಸಬಹುದಾದಂಥ ದರದಲ್ಲಿ ಅಂಥ ಆಸ್ತಿಗಳ ಬೆಲೆಯ ಮೇಲಿನ ಬಡ್ಡಿಯನ್ನು ಸಂದಾಯ ಮಾಡತಕ್ಕದ್ದು ಮತ್ತು ಅಂಥ ಬಡ್ಡಿಯು ಮಂಡಳಿಯ ವೆಚ್ಚದ ಒಂದು ಭಾಗವಾಗಿರುವುದಾಗಿ ಭಾವಿಸತಕ್ಕದ್ದು.][1]

**25. ಲೆಕ್ಕ ಪತ್ರಗಳು ಮತ್ತು ಲೆಕ್ಕ ಪರಿಶೋಧನೆ :-** (1) ಮಂಡಳಿಯು, ಆಂತರಿಕ ತಪಾಸಣೆಯ ಯುಕ್ತ ಪದ್ಧತಿಯನ್ನು ಒಳಗೊಂಡು ಸರಿಯಾದ ಲೆಕ್ಕಪತ್ರಗಳನ್ನು ಮತ್ತು ಅದಕ್ಕೆ ಸಂಬಂಧಪಟ್ಟಂತೆ ಇತರ ದಾಖಲೆಗಳನ್ನು ಇಡುವಂತೆ ಮಾಡತಕ್ಕದ್ದು ಮತ್ತು [2][ವಿನಿಯಮಗಳ][2] ಮೂಲಕ ನಿಯಮಿಸಬಹುದಾದಂಥ ನಮೂನೆಯಲ್ಲಿ ಆದಾಯ ಮತ್ತು ವೆಚ್ಚದ ಲೆಕ್ಕವನ್ನು ಒಳಗೊಂಡು ಲೆಕ್ಕಪತ್ರಗಳ ವಾರ್ಷಿಕ ವಿವರಪತ್ರವನ್ನು ಮತ್ತು ಜಮಾ ಖರ್ಚು ಪಟ್ಟಿಯನ್ನು ತಯಾರಿಸತಕ್ಕದ್ದು. [3][XXX][3]

(2) ಮಂಡಳಿಯ ಲೆಕ್ಕಪತ್ರಗಳನ್ನು [4][ಸರ್ಕಾರವು ನೇಮಕ ಮಾಡಬಹುದಾದಂಥ ಲೆಕ್ಕಪರಿಶೋಧಕರು][4] ಲೆಕ್ಕಪರಿಶೋಧನೆ ಮಾಡತಕ್ಕದ್ದು ಮತ್ತು ಅಂಥ ಲೆಕ್ಕಪರಿಶೋಧನೆಗೆ ಸಂಬಂಧಿಸಿದಂತೆ [3][ವಹಿಸಿದ ಯಾವುದೇ ವೆಚ್ಚವನ್ನು ಮಂಡಳಿಯು ಸಂದಾಯಮಾಡತಕ್ಕದ್ದು.][3]

(3) [4][ಸರ್ಕಾರವು ನೇಮಕಮಾಡಿದ ಲೆಕ್ಕಪರಿಶೋಧಕನು][4] ಅಂಥ ಲೆಕ್ಕಪರಿಶೋಧನೆಗೆ ಸಂಬಂಧಿಸಿದಂತೆ ಸರ್ಕಾರದ ಲೆಕ್ಕಪತ್ರಗಳ ಪರಿಶೋಧನೆಗೆ ಸಂಬಂಧಿಸಿದಂತೆ ಭಾರತದ ಕಂಟ್ರೋಲರ್ ಮತ್ತು ಆಡಿಟರ್ ಜನರಲ್ಲನು ಹೊಂದಿರುವಂಥವೆ ಹಕ್ಕುಗಳು, ವಿಶೇಷಾಧಿಕಾರಗಳು ಮತ್ತು ಅಧಿಕಾರವನ್ನು ಹೊಂದಿರತಕ್ಕದ್ದು ಮತ್ತು ವಿಶೇಷವಾಗಿ ಪುಸ್ತಕಗಳು, ಲೆಕ್ಕಪತ್ರಗಳು, ಸಂಬಂಧಪಟ್ಟ ವೋಚರ್‌ಗಳು ಮತ್ತು ಇತರ ದಸ್ತಾವೇಜುಗಳು ಮತ್ತು ಕಾಗದಪತ್ರಗಳನ್ನು ಹಾಜರುಪಡಿಸುವಂತೆ ತಗಾದೆ ಮಾಡುವ ಮತ್ತು ಮಂಡಳಿಯ ಯಾವುದೇ ಕಛೇರಿಯನ್ನು ಪರಿಶೀಲಿಸುವ ಹಕ್ಕನ್ನು ಹೊಂದಿರತಕ್ಕದ್ದು.

(4) [4][ಲೆಕ್ಕ ಪರಿಶೋಧಕನು][4] ಪ್ರಮಾಣೀಕರಿಸಿದ ಮಂಡಳಿಯ ಲೆಕ್ಕಪತ್ರಗಳನ್ನು ಅವುಗಳ ಬಗೆಗಿನ ಲೆಕ್ಕಪರಿಶೋಧನಾ ವರದಿಯೊಂದಿಗೆ ಪ್ರತಿವರ್ಷ ರಾಜ್ಯ ಸರ್ಕಾರಕ್ಕೆ ಕಳುಹಿಸತಕ್ಕದ್ದು ಮತ್ತು ರಾಜ್ಯ ಸರ್ಕಾರವು, ಅದಕ್ಕೆ ಸಂಬಂಧಿಸಿದಂತೆ ಅದು ಸೂಕ್ತವೆಂದು ಭಾವಿಸುವಂಥ ಸೂಚನೆಗಳನ್ನು ಮಂಡಳಿಗೆ ಕೊಡಬಹುದು ಮತ್ತು ಮಂಡಳಿಯು ಅಂಥ ಸೂಚನೆಗಳನ್ನು ಪಾಲಿಸತಕ್ಕದ್ದು.

(5) ರಾಜ್ಯ ಸರ್ಕಾರವು -

(ಎ) (4)ನೇ ಉಪಪ್ರಕರಣದ ಮೇರೆಗೆ ಅದಕ್ಕೆ ಕಳುಹಿಸಿಕೊಟ್ಟ ಮಂಡಳಿಯ ಲೆಕ್ಕಪತ್ರಗಳನ್ನು, ಅವುಗಳ ಬಗೆಗಿನ ಲೆಕ್ಕಪರಿಶೋಧನಾ ವರದಿಯೊಂದಿಗೆ ರಾಜ್ಯ ವಿಧಾನ ಮಂಡಲದ ಮುಂದೆ ಪ್ರತಿವರ್ಷ ಇಡುವಂತೆ ಮಾಡತಕ್ಕದ್ದು; ಮತ್ತು

(ಬಿ) ಮಂಡಳಿಯ ಲೆಕ್ಕಪತ್ರಗಳನ್ನು [2][ವಿನಿಯಮಗಳ][2] ಮೂಲಕ ನಿಯಮಿಸಿದ ರೀತಿಯಲ್ಲಿ ಪ್ರಕಟಿಸುವಂತೆ ಮಾಡತಕ್ಕದ್ದು ಮತ್ತು ಅದರ ಪ್ರತಿಗಳು ಯುಕ್ತ ಬೆಲೆಯಲ್ಲಿ ಮಾರಾಟಕ್ಕೆ ಲಭ್ಯವಾಗುವಂತೆ ಮಾಡತಕ್ಕದ್ದು.

---

1. 1966 ಅಧಿನಿಯಮ ಸಂಖ್ಯೆ 6ರ ಮೂಲಕ 24ಎ ಮತ್ತು 24ಬಿ ಪ್ರಕರಣಗಳನ್ನು 10.9.1964 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
2. 1966ರ ಅಧಿನಿಯಮ ಸಂಖ್ಯೆ 6ರ ಮೂಲಕ 17.3.1966 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
3. 1984 ಅಧಿನಿಯಮ ಸಂಖ್ಯೆ 18ರ ಮೂಲಕ 21.4.1984 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.
4. 1984 ಅಧಿನಿಯಮ ಸಂಖ್ಯೆ 18ರ ಮೂಲಕ 21.4.1984 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

## ಅಧ್ಯಾಯ-IV

### ನೀರು ಸರಬರಾಜು

**26. ಮಂಡಳಿಯಲ್ಲಿ ಕಾಮಗಾರಿಗಳು ನಿಹಿತಗೊಳ್ಳುವುದು :-** ಈ ಅಧ್ಯಾಯವು ಜಾರಿಗೆ ಬರುವ ದಿನಾಂಕದಂದು ಮತ್ತು ಅಂದಿನಿಂದ ತಿಪ್ಪಗೊಂಡನ ಹಳ್ಳಿ ಮತ್ತು ಹೆಸರಘಟ್ಟದಲ್ಲಿರುವ ಜಲ ನಿಯಂತ್ರಣ ಕೇಂದ್ರಗಳು ಮತ್ತು ಜಲಾಶಯಗಳು ಒಳಗೊಂಡು ಎಲ್ಲಾ ಸಾರ್ವಜನಿಕ ಜಲಾಶಯಗಳು, ಕೆರೆಗಳು, ನೀರು ತೊಟ್ಟಿಗಳು, ಕಾರಂಜಿಗಳು, ಬಾವಿಗಳು, ಪಂಪುಗಳು, ಕೊಳವೆಗಳು, ಕೊಳಾಯಿಗಳು, ನಳಿಕೆಗಳು ಮತ್ತು [1][ಬೆಂಗಳೂರು ಮಹಾನಗರ ಪ್ರದೇಶಕ್ಕೆ][1] ನೀರು ಸರಬರಾಜು ಮಾಡುವುದಕ್ಕೆ ಸಂಬಂಧಿಸಿದ ಇತರ ಕಾಮಗಾರಿಗಳು ಮತ್ತು ಸರ್ಕಾರದ, ನಿಗಮದ ವೆಚ್ಚದಲ್ಲಿಯೇ ಆಗಲಿ ಅಥವಾ ಅನ್ಯಥಾ ಆಗಲಿ ಹಾಕಿದ ಏರು ಪ್ರಧಾನ ಕೊಳವೆಗಳು ಮತ್ತು ಎಲ್ಲಾ ಸೇತುವೆಗಳು, ಕಟ್ಟಡಗಳು, ಯಂತ್ರ ಸಾಮಗ್ರಿ, ಕಾಮಗಾರಿಗಳು, ಸಾಮಗ್ರಿಗಳು ಮತ್ತು ಅದಕ್ಕೆ ಸಂಬಂಧಿಸಿದ ಇತರ ವಸ್ತುಗಳು ಮತ್ತು ಅದಕ್ಕೆ ಹೊಂದಿಕೊಂಡಿರುವ ಮತ್ತು ಲಗತ್ತಾಗಿರುವ ಎಲ್ಲಾ ಭೂಮಿ (ಖಾಸಗಿ ಸ್ವತ್ತಾಗಿಲ್ಲದೇ ಇರುವುದು) ಮಂಡಳಿಯಲ್ಲಿ ನಿಹಿತಗೊಳ್ಳತಕ್ಕುದು ಮತ್ತು ಅವು ಅದರ ನಿಯಂತ್ರಣಕ್ಕೆ ಒಳಪಟ್ಟಿರತಕ್ಕುದು.

**27. ನೀರು ಸರಬರಾಜು ಗೃಹದ ನಿರ್ಮಾಣ :-** (1) ಮಂಡಳಿಯು, ಬೆಂಗಳೂರು ಮಹಾನಗರ ಪ್ರದೇಶಕ್ಕೆ ನೀರನ್ನು ಸರಬರಾಜು ಮಾಡುವುದಕ್ಕಾಗಿ, ರಾಜ್ಯದಲ್ಲಿ ಯಾವುದೇ ಸ್ಥಳದಲ್ಲಿ ನೀರು ಶೋಧಿಸುವ ಸ್ಥಾವರುಗಳು, ಜಲಾಶಯಗಳು, ಯಂತ್ರ ಸಾಮಗ್ರಿ, ನಳಿಕೆಗಳು, ಕೊಳವೆಗಳು ಅಥವಾ ಇತರ ಕಾಮಗಾರಿಗಳನ್ನು ನಿರ್ಮಿಸಬಹುದು, ಹಾಕಬಹುದು ಅಥವಾ ಕಟ್ಟಬಹುದು ಮತ್ತು ನಿವಾಸಿಗಳ ಉಪಯೋಗಕ್ಕಾಗಿ ಬೆಂಗಳೂರು ಮಹಾನಗರ ಪ್ರದೇಶದೊಳಗೆ ಕೆರೆಗಳು, ಜಲಾಶಯಗಳು, ಯಂತ್ರಸಾಮಗ್ರಿಗಳು, ಪ್ರಧಾನ ಕೊಳವೆಗಳು, ಕಾರಂಜಿಗಳು ಮತ್ತು ಇತರ ಅನುಕೂಲತೆಗಳನ್ನು ಒದಗಿಸಬಹುದು.

(2) ಮಂಡಳಿಯು, ಈಗಿರುವ ನೀರು ಸರಬರಾಜು ಗೃಹಗಳನ್ನು ನಿರ್ವಹಿಸಿಕೊಂಡು ಬರುವಂತೆ ಮತ್ತು ಅವುಗಳಿಗೆ ನೀರನ್ನು ಸರಬರಾಜು ಮಾಡುವಂತೆ ಮಾಡಬಹುದು ಅಥವಾ ಅದು ಅಂಥ ಯಾವುದೇ ಗೃಹಗಳನ್ನು ಮುಚ್ಚಬಹುದು ಮತ್ತು ಅವುಗಳಿಗೆ ಬದಲಾಗಿ ಅಂಥ ಇತರ ಗೃಹಗಳನ್ನು ಕಟ್ಟಬಹುದು ಮತ್ತು ಅವುಗಳನ್ನು ನಿರ್ವಹಿಸಿಕೊಂಡು ಬರುವಂತೆ ಮತ್ತು ಅವುಗಳಿಗೆ ನೀರು ಸರಬರಾಜು ಮಾಡುವಂತೆ ಮಾಡಬಹುದು.

**28. ನೀರು ಸರಬರಾಜು ಆವರಣದ ಮೇಲೆ ಅತಿಕ್ರಮಣ :-** ಯಾವುನೇ ವ್ಯಕ್ತಿಯು, ಮಂಡಳಿ ಅಥವಾ ನೀರು ಸರಬರಾಜು ಇಂಜಿನಿಯರ್‌ನಿಂದ ಅನುಮತಿಯನ್ನು ಕ್ರಮಬದ್ಧವಾಗಿ ಪಡೆದಿದ್ದ ಹೊರತು, ಯಾವುದರ ಗುಂಟ ನಳಿಕೆ ಅಥವಾ ಕೊಳವೆಯನ್ನು ಹಾಕಲಾಗಿದೆಯೋ ಮಂಡಳಿಯಲ್ಲಿ ನಿಹಿತವಾಗಿರುವ ಆ ಭೂಮಿಯ ಮೇಲೆ ಅಥವಾ ನೀರು ಸರಬರಾಜಿಗೆ ಸಂಬಂಧಿಸಿದ ಯಾವುದೇ ಆವರಣದ ಮೇಲೆ ಪ್ರವೇಶಿಸತಕ್ಕುದಲ್ಲ.

**29. ನೀರಿನ ಪ್ರಧಾನಕೊಳವೆಗಳ ಮೇಲೆ ಕಟ್ಟಡವನ್ನು ಕಟ್ಟುವ ಬಗ್ಗೆ ನಿಷೇಧ :-** (1) ಮಂಡಳಿಯ ಅಥವಾ ನೀರು ಸರಬರಾಜು ಇಂಜಿನಿಯರನ ಅನುಮತಿಯಿಲ್ಲದೆ, ಮಂಡಳಿಯ ಯಾವುದೇ ನೀರಿನ ಪ್ರಧಾನ ಕೊಳವೆಯ ಮೇಲೆ ಯಾವುದೇ ಕಟ್ಟಡ, ಗೋಡೆ ಅಥವಾ ಇತರ ರಚನೆಯನ್ನು ಹೊಸದಾಗಿ ಕಟ್ಟತಕ್ಕುದಲ್ಲ ಮತ್ತು ಯಾವುದೇ ಬೀದಿಯನ್ನು ರಚಿಸತಕ್ಕುದಲ್ಲ.

(2) ಯಾವುದೇ ಕಟ್ಟಡ, ಗೋಡೆ ಅಥವಾ ಇತರ ರಚನೆಯನ್ನು ಹಾಗೆ ಕಟ್ಟಿದರೆ ಅಥವಾ ಯಾವುದೇ ಬೀದಿಯನ್ನು ಹಾಗೆ ರಚಿಸಿದ್ದರೆ, ನೀರು ಸರಬರಾಜು ಇಂಜಿನಿಯರನು ಅದನ್ನು ತೆಗೆದುಹಾಕುವಂತೆ ಮಾಡಬಹುದು ಅಥವಾ ನೀರು ಸರಬರಾಜು ಇಂಜಿನಿಯರನು ಸೂಕ್ತವೆಂದು ಭಾವಿಸುವಂತೆ ಅನ್ಯಥಾ ವ್ಯವಹರಿಸಬಹುದು ಮತ್ತು ಅದರಿಂದಾಗಿ ವಹಿಸಿದ ವೆಚ್ಚಗಳನ್ನು (1)ನೇ ಉಪಪ್ರಕರಣದ ಉಪಬಂಧಗಳನ್ನು ಉಲ್ಲಂಘಿಸುವ ವ್ಯಕ್ತಿಗಳು ಸಂದಾಯಮಾಡತಕ್ಕುದು.

**30. ಗೃಹ ಜೋಡಣೆಗಳ ಮೇಲೆ ನಿಯಂತ್ರಣ:-**ಅವುಗಳು ಸೇರಿರುವಂಥ ಆವರಣದ ಒಳಗಡೆಯೇ ಅಥವಾ ಹೊರಗಡೆಯೇ ಆಗಲಿ, ನೀರು ಸರಬರಾಜು ಪ್ರಧಾನ ಕೊಳವೆಗಳೊಂದಿಗಿನ ಎಲ್ಲಾ ಗೃಹ ಜೋಡಣೆಗಳು ಮಂಡಳಿಯ ನಿಯಂತ್ರಣದಲ್ಲಿ ಇರತಕ್ಕುದು. ಆದರೆ ಅವುಗಳು ಸೇರಿರುವಂಥ ಆವರಣದ ಒಡೆಯನ ವೆಚ್ಚದಲ್ಲಿ ಅಥವಾ ಅವುಗಳನ್ನು ನಿರ್ಮಿಸಿರುವಂಥ ಉಪಯೋಗಕ್ಕಾಗಿ ಮತ್ತು ಈ ಬಗ್ಗೆ ರಚಿಸಿದ ವಿನಿಯಮಗಳಿಗೆ ಅನುಗುಣವಾಗಿ ಬದಲಾವಣೆ ಮಾಡತಕ್ಕುದು, ದುರಸ್ತಿ ಮಾಡತಕ್ಕುದು ಮತ್ತು ಸುಸ್ಥಿತಿಯಲ್ಲಿ ಇಡತಕ್ಕುದು.

**31. ಸರಬರಾಜು ಮಾಡಿದ ನೀರಿಗಾಗಿ ಮಾಡಬೇಕಾದ ಸಂದಾಯ:-** 27ನೇ ಪ್ರಕರಣ ಅಥವಾ ಯಾವುದೇ ಕಾನೂನು, ಕರಾರು ಅಥವಾ ಇತರ ಲಿಖಿತದಲ್ಲಿ ಏನೇ ಅಡಕವಾಗಿದ್ದಾಗ್ಯೂ, ಈ ಅಧಿನಿಯಮದ ಮೇರೆಗೆ ಸರಬರಾಜು ಮಾಡಿದ ಎಲ್ಲಾ ನೀರಿಗಾಗಿ, ವಿನಿಯಮಗಳ ಮೂಲಕ ನಿರ್ದಿಷ್ಟಪಡಿಸಬಹುದಾದಂಥ ದರಗಳಲ್ಲಿ ಅಂಥ ಕಾಲಗಳಲ್ಲಿ ಮತ್ತು ಅಂಥ ಷರತ್ತುಗಳ ಮೇರೆಗೆ ಸಂದಾಯವನ್ನು ಮಾಡತಕ್ಕುದು ಮತ್ತು ವಿವಿಧ ಉದ್ದೇಶಗಳಿಗಾಗಿನ ನೀರಿನ ಸರಬರಾಜಿಗಾಗಿ ಬೇರೆ ಬೇರೆ ದರಗಳನ್ನು ನಿಯಮಿಸಬಹುದು:

[1][ಪರಂತು, ಬೆಂಗಳೂರು ನಗರ ಪೌರ ನಿಗಮ ಅಧಿನಿಯಮ, 1949ರ 149-ಎ ಪ್ರಕರಣದ ಮೇರೆಗೆ ನಿಗಮದೊಡನೆ ವ್ಯವಸ್ಥೆಯನ್ನು ಮಾಡಿಕೊಂಡಿರುವಲ್ಲಿ , ನೀರನ್ನು ನಗರದ ನಿವಾಸಿಗಳಿಗೆ ಅಂಥ ವ್ಯವಸ್ಥೆಗೆ ಅನುಸಾರವಾಗಿ ಮಂಡಲಿಯು ಸರಬರಾಜು ಮಾಡತಕ್ಕುದು.][1]

---

1. 1966ರ ಅಧಿನಿಯಮ ಸಂಖ್ಯೆ 6ರ ಮೂಲಕ 17.3.1966 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

2. 1966ರ ಅಧಿನಿಯಮ ಸಂಖ್ಯೆ 10ರ ಮೂಲಕ 31.3.1966 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**32. ಗೃಹ ಬಳಕೆಗಾಗಿ ಖಾಸಗಿ ನೀರು ಸರಬರಾಜು :-** (1) ನೀರು ಸರಬರಾಜು ಇಂಜಿನಿಯರನು, ಯಾವುದೇ ಕಟ್ಟಡದ ಒಡೆಯ ಅಥವಾ ಅಧಿಭೋಗದಾರನು ಮಾಡಿಕೊಂಡ ಅರ್ಜಿಯ ಮೇಲೆ ವಿನಿಯಮಗಳಿಗೆ ಅನುಸಾರವಾಗಿ ಗೃಹಬಳಕೆ ಮತ್ತು ಉಪಯೋಗಕ್ಕಾಗಿ ಅದಕ್ಕೆ ನೀರನ್ನು ಸರಬರಾಜು ಮಾಡಲು ವ್ಯವಸ್ಥೆ ಮಾಡಬಹುದು.

(2) ಈ ಅಧಿನಿಯಮವು ಪ್ರಾರಂಭವಾದ ತರುವಾಯ ನಿರ್ಮಿಸಬಹುದಾದ ಅಥವಾ ಪುನರ್ ನಿರ್ಮಿಸಬಹುದಾದಂಥ ವಾಸದ ಮನೆಯ ಒಡೆಯನಿಗೆ ಅವನು, ಆ ವಾಸದ ಮನೆಯ ಗೃಹಬಳಕೆ ಮತ್ತು ಅದರ ಉಪಯೋಗಕ್ಕಾಗಿ ಸಾಕಷ್ಟಾಗಬಹುದೆಂದು ಮಂಡಳಿಗೆ ಕಂಡುಬರುವಂತೆ ಆರೋಗ್ಯಕರ ನೀರು ಸರಬರಾಜು ಆ ಮನೆಯಿಂದ ಸೂಕ್ತ ಅಂತರದೊಳಗೆ ಒದಗಿಸಲಾಗಿದೆ ಎಂದು ಮಂಡಳಿಯಿಂದ ಪ್ರಮಾಣಪತ್ರವನ್ನು ಪಡೆಯುವವರೆಗೆ ಅದನ್ನು ಅಧಿಭೋಗಕ್ಕೆ ತೆಗೆದುಕೊಳ್ಳುವುದು ಅಥವಾ ಅದನ್ನು ಅಧಿಭೋಗಕ್ಕೆ ತೆಗೆದುಕೊಳ್ಳುವಂತೆ ಮಾಡುವುದು ಅಥವಾ ಅನುಮತಿಸುವುದು ಕಾನೂನು ಸಮ್ಮತವಾಗಿರತಕ್ಕುದಲ್ಲ.

(3) ಯಾವುದೇ ಭೂಮಿಯ ಮೇಲೆ ಎರಡು ಅಥವಾ ಅದಕ್ಕಿಂತ ಹೆಚ್ಚು ಮೇಲ್ ರಚನೆಗಳಿರುವಲ್ಲಿ ಮತ್ತು ಆ ಭೂಮಿಯ ಒಡೆಯನು ಆ ಎಲ್ಲಾ ಮೇಲ್ ರಚನೆಗಳ ಒಡೆಯನಾಗಿಲ್ಲದೆ ಇರುವಲ್ಲಿ ಮಂಡಳಿಯು, ಗೃಹ ಬಳಕೆ ಮತ್ತು ಉಪಯೋಗಕ್ಕಾಗಿ ಆ ಮೇಲ್ ರಚನೆಗಳಿಗೆ ಸರಿಯಾದ ನೀರು ಸರಬರಾಜು ಇಲ್ಲವೆಂದು ಮತ್ತು ಅಂಥ ಯಾವುದೇ ಮೇಲ್ ರಚನೆಯ ಯಾವುದೇ ಭಾಗದಿಂದ ಮೂವತ್ತೈದು ಮೀಟರ್‌ಗಳಿಗಿಂತ ಹೆಚ್ಚಿಲ್ಲದ ಅಂತರದಲ್ಲಿರುವ ಪ್ರಧಾನ ಕೊಳವೆಯಿಂದ ಅಂಥ ಸರಬರಾಜನ್ನು ಒದಗಿಸಬಹುದೆಂದು ಅದಕ್ಕೆ ಕಂಡುಬಂದರೆ ಅಂಥ ಸರಬರಾಜನ್ನು ಪಡೆದುಕೊಳ್ಳಲು ಆ ಭೂಮಿಯ ಒಡೆಯನನ್ನು ನೋಟೀಸಿನ ಮೂಲಕ ಅಗತ್ಯಪಡಿಸಬಹುದು.

**33. ಗೃಹಬಳಕೆ ಉದ್ದೇಶಕ್ಕಾಗಿರುವ ನೀರಿನ ಸರಬರಾಜು ಕೆಲವು ನಿರ್ದಿಷ್ಟ ಉದ್ದೇಶಗಳಿಗಾಗಿ ಯಾವುದೇ ಸರಬರಾಜನ್ನು ಒಳಗೊಳ್ಳತಕ್ಕುದಲ್ಲ:-** ಈ ಅಧಿನಿಯಮದ ಮೇರೆಗಿನ ಗೃಹಬಳಕೆಯ ಉದ್ದೇಶಗಳಿಗಾಗಿನ ನೀರಿನ ಸರಬರಾಜು,-

(ಎ) ಯಾವುದೇ ವ್ಯಾಪಾರ, ತಯಾರಿಕೆ ಅಥವಾ ವ್ಯವಹಾರಗಳಿಗಾಗಿನ;

(ಬಿ) ತೋಟಗಳಿಗಾಗಿನ ಅಥವಾ ನೀರಾವರಿ ಉದ್ದೇಶಗಳಿಗಾಗಿನ;

(ಸಿ) ಕಟ್ಟಡ ನಿರ್ಮಾಣ ಉದ್ದೇಶಗಳಿಗಾಗಿನ;

(ಡಿ) ಕಾರಂಜಿಗಳು, ಈಜುವ ಕೊಳಗಳು, ಸಾರ್ವಜನಿಕ ಸ್ನಾನಗೃಹಗಳು ಅಥವಾ ಕೆರೆಗಳಿಗಾಗಿನ ಅಥವಾ ಯಾವುದೇ ಅಲಂಕಾರಿಕ ಅಥವಾ ಯಾಂತ್ರಿಕ ಉದ್ದೇಶಕ್ಕಾಗಿನ;

(ಇ) ಅವುಗಳನ್ನು ಮಾರಾಟ ಅಥವಾ ಬಾಡಿಗೆಗಾಗಿ ಅಥವಾ ಅವುಗಳ ಉತ್ಪನ್ನದ ಮಾರಾಟ ಅಥವಾ ಅವುಗಳಿಂದ ಮಾಡಿದ ಯಾವುದೇ ತಯಾರಿಕೆಗಾಗಿ ಇಟ್ಟಿರುವಲ್ಲಿ ಆ ಪ್ರಾಣಿಗಳಿಗಾಗಿನ;

(ಎಫ್) ಹೋಟೆಲುಗಳು, ಖಾನಾವಳಿಗಳು ಮತ್ತು ವಸತಿ ಕ್ಲಬ್‌ಗಳ ನಿವಾಸಿಗಳ ಬಳಕೆ ಮತ್ತು ಉಪಯೋಗಕ್ಕಾಗಿನ;

(ಜಿ) ಥಿಯೇಟರುಗಳು ಮತ್ತು ಸಿನಿಮಾಗಳಿಗೆ ಹೋಗುವ ವ್ಯಕ್ತಿಯ ಬಳಕೆ ಮತ್ತು ಉಪಯೋಗಕ್ಕಾಗಿನ;

(ಹೆಚ್) ಬೀದಿಗಳ ನಿರ್ಮಾಣಕ್ಕಾಗಿನ ಅಥವಾ ಅವುಗಳಿಗೆ ನೀರು ಹಾಕುವುದಕ್ಕಾಗಿನ; ಅಥವಾ

(ಐ) ಅವುಗಳನ್ನು ಮಾರಾಟ ಅಥವಾ ಬಾಡಿಗೆಗಾಗಿ ಇಟ್ಟಿರುವಲ್ಲಿ ವಾಹನಗಳನ್ನು ತೊಳೆಯುವುದಕ್ಕಾಗಿನ

- ಯಾವುದೇ ಸರಬರಾಜನ್ನು ಒಳಗೊಳ್ಳುವುದೆಂಬುದಾಗಿ ಭಾವಿಸತಕ್ಕುದಲ್ಲ.

[1][xxx][1]

**34. ಗೃಹಬಳಕೆಯ ಉದ್ದೇಶಗಳಿಗಾಗಿ ಸರಬರಾಜು ಮಾಡಿದ ನೀರನ್ನು ಗೃಹೇತರ ಬಳಕೆಯ ಉದ್ದೇಶಗಳಿಗಾಗಿ ಉಪಯೋಗಿಸತಕ್ಕುದಲ್ಲ:-** ಯಾವನೇ ವ್ಯಕ್ತಿಯು, ಮಂಡಳಿಯ ಬರಹದಲ್ಲಿನ ಅನುಮತಿಯಿಲ್ಲದೆ, ಗೃಹಬಳಕೆಯ ಉದ್ದೇಶಗಳಿಗಾಗಿ ಸರಬರಾಜು ಮಾಡಿದ ನೀರನ್ನು ಗೃಹ ಬಳಕೆಯ ಉದ್ದೇಶಗಳನ್ನು ಹೊರತುಪಡಿಸಿ ಇತರ ಉದ್ದೇಶಕ್ಕಾಗಿ ಉಪಯೋಗಿಸತಕ್ಕುದಲ್ಲ ಅಥವಾ ಉಪಯೋಗಿಸಲು ಅವಕಾಶ ಮಾಡಿಕೊಡತಕ್ಕುದಲ್ಲ.

**35. ಗೃಹೇತರ ಉದ್ದೇಶಗಳಿಗಾಗಿ ನೀರು ಸರಬರಾಜು ಮಾಡಲು ಅಧಿಕಾರ:-** (1) ಮುಖ್ಯ ಇಂಜಿನಿಯರನು, ಮಂಡಳಿಯ ಮಂಜೂರಾತಿಯೊಂದಿಗೆ ಯಾವ ಉದ್ದೇಶಕ್ಕಾಗಿ ಅಂಥ ಸರಬರಾಜು ಅಗತ್ಯವಾಗಿದೆಯೋ ಆ ಉದ್ದೇಶವನ್ನು ಮತ್ತು ಬಳಸಿಕೊಳ್ಳಬಹುದಾದ ಸಂಭವವಿರುವ ಪರಿಮಾಣವನ್ನು ನಿರ್ದಿಷ್ಟಪಡಿಸುವ ಬರಹದಲ್ಲಿನ ಅರ್ಜಿಯನ್ನು ಸ್ವೀಕರಿಸಿದ ಮೇಲೆ, ಈ ಅಧಿನಿಯಮ ಮತ್ತು ಅದರ ಮೇರೆಗೆ ರಚಿಸಿದ ವಿನಿಯಮಗಳಿಗೆ ಸುಸಂಗತವಾದ ನಿಬಂಧನೆಗಳು ಮತ್ತು ಷರತ್ತುಗಳ ಮೇಲೆ ಗೃಹ ಬಳಕೆಯ ಉದ್ದೇಶವನ್ನು ಹೊರತುಪಡಿಸಿ ಯಾವುದೇ ಇತರ ಉದ್ದೇಶಕ್ಕಾಗಿ ನೀರನ್ನು ಸರಬರಾಜು ಮಾಡಬಹುದು.

(2) (1)ನೇ ಉಪಪ್ರಕರಣದ ಮೇರೆಗೆ ಅರ್ಜಿಯನ್ನು ಸ್ವೀಕರಿಸಿದಾಗ, ಮುಖ್ಯ ಇಂಜಿನಿಯರನು, ವಿನಿಯಮಗಳ ಮೂಲಕ ನಿಗದಿಪಡಿಸಬಹುದಾದಂಥ ಚಾರ್ಜುಗಳು ಮತ್ತು ದರಗಳಿಗೆ ಒಳಪಟ್ಟು, ವಿನಿಯಮಗಳ ಮೂಲಕ ನಿಯಮಿಸಬಹುದಾದಂಥ ಉದ್ದಗಲದ ಮತ್ತು ವಿವರಣೆಯ ಅವಶ್ಯಕ ಕೊಳವೆಗಳು ಮತ್ತು ನೀರಿನ ಜೋಡಣೆಗಳನ್ನು ಹಾಕಬಹುದು ಅಥವಾ ಹಾಕಲು ಅನುಮತಿಸಬಹುದು ಮತ್ತು ಅಂಥ ಕೊಳವೆಗಳು ಮತ್ತು ಜೋಡಣೆಗಳ ಮೂಲಕ ನೀರಿನ ಸರಬರಾಜನ್ನು ವ್ಯವಸ್ಥೆ ಮಾಡಬಹುದು.

---

1. 1984ರ ಅಧಿನಿಯಮ ಸಂಖ್ಯೆ 18ರ ಮೂಲಕ 1.12.1964 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

**36. ನಿಗಮ ಮತ್ತು ಇತರ ಸ್ಥಳೀಯ ಪ್ರಾಧಿಕಾರಗಳಿಗೆ ನೀರು ಸರಬರಾಜು:-** ಸರ್ಕಾರ, ನಿಗಮ ಅಥವಾ ಯಾವುದೇ ಇತರ ಸ್ಥಳೀಯ ಪ್ರಾಧಿಕಾರಕ್ಕೆ, ಮಂಡಳಿಯು ನಿರ್ಧರಿಸತಕ್ಕಂಥ ಸಂದಾಯದ ಬಗ್ಗೆ ಮತ್ತು ಅವಧಿಯ ಬಗೆಗಿನ ನಿಬಂಧನೆಗಳು ಮತ್ತು ಷರತ್ತುಗಳ ಮೇಲೆ ನೀರು ಸರಬರಾಜು ಮಾಡಬಹುದು.

**37. ಬೆಂಕಿಯನ್ನು ಆರಿಸುವುದಕ್ಕಾಗಿ ನೀರಿನ ಉಪಯೋಗ:-** ಬೆಂಕಿಯನ್ನು ಆರಿಸಲು ಹಣವನ್ನು ಸಂದಾಯ ಮಾಡದೆ ನೀರನ್ನು ಉಪಯೋಗಿಸಿಕೊಳ್ಳಬಹುದು.

**38. ಸಾರ್ವಜನಿಕ ನೀರು ಸರಬರಾಜು:-** (1) ಮಂಡಳಿಯು, ನಿರ್ಧರಿಸಬಹುದಾದಂಥ ಚಾರ್ಜುಗಳನ್ನು ನಿಗಮವು ಸಂದಾಯಮಾಡುವುದಕ್ಕೆ ಒಳಪಟ್ಟು, ಮಂಡಳಿಯು, ಬೆಂಗಳೂರು ನಗರದೊಳಗೆ ಸಾರ್ವಜನಿಕರಿಗೆ ಆರೋಗ್ಯಕರವಾದ ನೀರಿನ ಉಚಿತ ಸರಬರಾಜನ್ನು ಮಾಡಬಹುದು ಮತ್ತು ಆ ಉದ್ದೇಶಕ್ಕಾಗಿ ಸಾರ್ವಜನಿಕ ನೀರೆತ್ತುವ ಕೊಳವೆಗಳು ಅಥವಾ ಇತರ ಅನುಕೂಲತೆಗಳನ್ನು ನಿರ್ಮಿಸಬಹುದು.

(2) ನೀರು ಸರಬರಾಜು ಇಂಜಿನಿಯರನು, ನಿಗಮದ ಕಮಿಷನರನೊಡನೆ ಸಮಾಲೋಚಿಸಿ, ಸಾರ್ವಜನಿಕ ನೀರೆತ್ತುವ ಕೊಳವೆ ಅಥವಾ ಇತರ ಅನುಕೂಲತೆಯನ್ನು ಅದು ಸಾರ್ವಜನಿಕರಿಗೆ ಆರೋಗ್ಯಕರ ನೀರಿನ ಸರಬರಾಜಿಗಾಗಿ ಇನ್ನು ಮುಂದೆ ಅಗತ್ಯವಿಲ್ಲದಿರುವಾಗ ಮುಚ್ಚಬಹುದು.

**39. ಪ್ರಧಾನ ಕೊಳವೆಗಳನ್ನು ಹಾಕಲು ಅಧಿಕಾರ:-** (1) ಬೆಂಗಳೂರು ನಗರ ಪೌರ ನಿಗಮ ಅಧಿನಿಯಮ, 1949 ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಇತರ ಕಾನೂನಿನಲ್ಲಿ ಏನೇ ಅಡಕವಾಗಿದ್ದಾಗ್ಯೂ, ಮಂಡಳಿಯು, ಬೆಂಗಳೂರು ಮಹಾನಗರದ ಪ್ರದೇಶದ ಸ್ಥಳೀಯ ಪರಿಮಿತಿಗಳೊಳಗಾಗಲಿ ಅಥವಾ ಅದರ ಹೊರಗಡೆಯಾಗಲಿ,-

(ಎ) ಸರ್ಕಾರ, ನಿಗಮ ಅಥವಾ ಯಾವುದೇ ಇತರ ಸ್ಥಳೀಯ ಪ್ರಾಧಿಕಾರ ಅಥವಾ ಸರ್ಕಾರದ ಒಡೆತನ ಅಥವಾ ನಿಯಂತ್ರಣದಲ್ಲಿರುವ ಯಾವುದೇ ನಿಗಮದಲ್ಲಿ ನಿಹಿತವಾಗಿರುವ ಯಾವುದೇ ಬೀದಿ ಅಥವಾ ಯಾವುದೇ ಭೂಮಿಯಲ್ಲಿ;

(ಬಿ) ಆ ಭೂಮಿಯ ಮೇಲೆ ಅಥವಾ ಅದರಲ್ಲಿ ಬೀದಿಯ ಒಂದು ಭಾಗವಾಗಿರದ ಯಾವುದೇ ಭೂಮಿಯ ಪ್ರತಿಯೊಬ್ಬ ಒಡೆಯ ಮತ್ತು ಅಧಿಭೋಗದಾರನ ಸಮ್ಮತಿಯೊಂದಿಗೆ

- ಪ್ರಧಾನ ಕೊಳವೆಯನ್ನು ಹಾಕಬಹುದು ಮತ್ತು ಈ ಪ್ರಕರಣದ ಕಾರಣದಿಂದಾಗಿ ಅಥವಾ ಇತರ ಅನ್ಯಥಾ ಹಾಗೆ ಹಾಕಿದ ಯಾವುದೇ ಪ್ರಧಾನ ಕೊಳವೆಯನ್ನು ಕಾಲಕಾಲಕ್ಕೆ ಪರಿಶೀಲಿಸಬಹುದು, ದುರಸ್ತಿಮಾಡಬಹುದು, ಬದಲಾಯಿಸಬಹುದು ಅಥವಾ ನವೀಕರಿಸಬಹುದು ಅಥವಾ ಯಾವುದೇ ಕಾಲದಲ್ಲಿ ಅದನ್ನು ತೆಗೆದುಹಾಕಬಹುದು:

ಪರಂತು, ಈ ಉಪಪ್ರಕರಣದ ಉದ್ದೇಶಕ್ಕಾಗಿ ಅಗತ್ಯವಾದ ಸಮ್ಮತಿಯನ್ನು ತಡೆಹಿಡಿದಿರುವಲ್ಲಿ, ಮಂಡಳಿಯು, ಹಾಗೆ ಮಾಡುವ ಅದರ ಉದ್ದೇಶದ ಬಗ್ಗೆ ಭೂಮಿಯ ಒಡೆಯ ಅಥವಾ ಅಧಿಭೋಗದಾರನಿಗೆ ಬರಹದಲ್ಲಿನ ನೋಟೀಸನ್ನು ಕೊಟ್ಟ ತರುವಾಯ ಅಂಥ ಸಮ್ಮತಿ ಇಲ್ಲದೆಯೇ ಸಹ ಆ ಭೂಮಿಯ ಒಳಗೆ, ಮೇಲ್ಗಡೆ ಅಥವಾ ಮೇಲೆ ಪ್ರಧಾನ ಕೊಳವೆಯನ್ನು ಹಾಕಬಹುದು.

(2) ಮಂಡಳಿಯು, ಈ ಪ್ರಕರಣದ ಮೇರೆಗಿನ ಅಧಿಕಾರಗಳನ್ನು ಚಲಾಯಿಸಿ, (1)ನೇ ಉಪಪ್ರಕರಣದ (ಎ) ಖಂಡದಲ್ಲಿ ಉಲ್ಲೇಖಿಸಿದ ಬೀದಿ ಅಥವಾ ಭೂಮಿಯ ಒಂದು ಭಾಗವಾಗಿರದ ಯಾವುದೇ ಭೂಮಿಯ ಒಳಗೆ, ಮೇಲ್ಗಡೆ ಅಥವಾ ಅದರ ಮೇಲೆ ಪ್ರಧಾನ ಕೊಳವೆಯನ್ನು ಹಾಕುವಲ್ಲಿ ಅಥವಾ ಯಾವುದೇ ಅಂಥ ಭೂಮಿಯ ಒಳಗೆ, ಮೇಲ್ಗಡೆ ಅಥವಾ ಅವರ ಮೇಲೆ ಹಾಗೆ ಹಾಕಿದ ಪ್ರಧಾನ ಕೊಳವೆಯನ್ನು ಪರಿಶೀಲಿಸುವಲ್ಲಿ, ದುರಸ್ತಿ ಮಾಡುವಲ್ಲಿ, ಬದಲಾಯಿಸುವಲ್ಲಿ, ನವೀಕರಿಸುವಲ್ಲಿ ಅಥವಾ ತೆಗೆದುಹಾಕುವಲ್ಲಿ ಪ್ರಧಾನ ಕೊಳವೆಯ ಪರಿಶೀಲನೆ, ಅದನ್ನು ಹಾಕುವುದು, ದುರಸ್ತಿ ಮಾಡುವುದು, ಬದಲಾಯಿಸುವುದು, ನವೀಕರಿಸುವುದು ಅಥವಾ ತೆಗೆದುಹಾಕುವುದು ಇವುಗಳ ಕಾರಣದಿಂದಾಗಿ ಆ ಭೂಮಿಗೆ ಉಂಟಾದ ಯಾವುದೇ ಹಾನಿ ಅಥವಾ ಅದಕ್ಕೆ ಆದ ಹಾನಿಕಾರಕ ಪರಿಣಾಮದ ಬಗ್ಗೆ ಆ ಭೂಮಿಯಲ್ಲಿ ಹಿತಾಸಕ್ತಿಯನ್ನು ಹೊಂದಿರುವ ಪ್ರತಿಯೊಬ್ಬ ವ್ಯಕ್ತಿಗೆ ನಷ್ಟಪರಿಹಾರವನ್ನು ಅದು ಸಂದಾಯಮಾಡತಕ್ಕುದು.

**40. ಸರ್ವಿಸ್ ಪೈಪುಗಳು, ಇತ್ಯಾದಿಗಳನ್ನು ಹಾಕಲು ಅಧಿಕಾರ:-** (1) ಮಂಡಳಿಯು, ಬೆಂಗಳೂರು ಮಹಾನಗರ ಪ್ರದೇಶದ ಸ್ಥಳೀಯ ಪರಿಮಿತಿಗಳೊಳಗೆಯೇ ಆಗಲಿ ಅಥವಾ ಹೊರಗೆಯೇ ಆಗಲಿ, 39ನೇ ಪ್ರಕರಣದ (1)ನೇ ಉಪಪ್ರಕರಣದ (ಎ) ಖಂಡದಲ್ಲಿ ಉಲ್ಲೇಖಿಸಿದ ಯಾವುದೇ ಬೀದಿ ಅಥವಾ ಯಾವುದೇ ಭೂಮಿಯಲ್ಲಿನ ಆವರಣಕ್ಕೆ ನೀರನ್ನು ಸರಬರಾಜು ಮಾಡುವುದಕ್ಕಾಗಿ ಅದು ಅವಶ್ಯವೆಂದು ಭಾವಿಸಬಹುದಾದಂಥ ಅಂಥ ನಿಲುಬಿರುಡೆಗಳು ಮತ್ತು ಇತರ ನೀರಿನ ಜೋಡಣೆಗಳೊಂದಿಗೆ ಅಂಥ ಸರ್ವಿಸ್ ಪೈಪುಗಳನ್ನು ಹಾಕಬಹುದು ಮತ್ತು ಈ ಪ್ರಕರಣದ ಕಾರಣದಿಂದಾಗಿಯೇ ಆಗಲೀ ಅಥವಾ ಅನ್ಯಥಾವಾಗಿಯೇ ಆಗಲಿ ಅಂಥ ಬೀದಿ ಅಥವಾ ಭೂಮಿಯಲ್ಲಿ ಹಾಕಿರುವ ಯಾವುದೇ ಸರ್ವೀಸ್ ಪೈಪನ್ನು ಕಾಲಕಾಲಕ್ಕೆ ಪರಿಶೀಲಿಸಬಹುದು, ದುರಸ್ತಿ ಮಾಡಬಹುದು, ಬದಲಾಯಿಸಬಹುದು ಅಥವಾ ನವೀಕರಿಸಬಹುದು ಮತ್ತು ಯಾವುದೇ ಕಾಲದಲ್ಲಿ ಅದನ್ನು ತೆಗೆದುಹಾಕಬಹುದು.

(2) ಸರ್ವೀಸ್ ಪೈಪನ್ನು (1)ನೇ ಉಪಪ್ರಕರಣದಲ್ಲಿ ಉಲ್ಲೇಖಿಸಿದ ಬೀದಿ ಅಥವಾ ಭೂಮಿಯ ಭಾಗವಾಗಿಲ್ಲದ ಭೂಮಿಯ ಒಳಗೆ, ಮೇಲ್ಗಡೆ ಅಥವಾ ಅದರ ಮೇಲೆ ಕಾನೂನುಬದ್ಧವಾಗಿ ಹಾಕಿರುವಲ್ಲಿ, ಮಂಡಳಿಯು, ಅಧಿಕೃತಗೊಳಿಸಬಹುದಾದಂಥ ಅಧಿಕಾರಿಗಳು ಕಾಲಕಾಲಕ್ಕೆ ಆ ಭೂಮಿಯ ಮೇಲೆ ಪ್ರವೇಶಿಸಬಹುದು ಮತ್ತು ಆ ಪೈಪನ್ನು ಪರಿಶೀಲಿಸಬಹುದು, ದುರಸ್ತಿ ಮಾಡಬಹುದು, ಬದಲಾಯಿಸಬಹುದು, ನವೀಕರಿಸಬಹುದು ಅಥವಾ ಅದನ್ನು ತೆಗೆದು ಹಾಕಬಹುದು ಅಥವಾ ಅದಕ್ಕೆ ಬದಲಾಗಿ ಹೊಸ ಪೈಪನ್ನು ಹಾಕಬಹುದು. ಆದರೆ ಅಂಥ ಕೆಲಸದ ಕ್ರಮದಲ್ಲಿ ಮಾಡಿದ ಯಾವುದೇ ಹಾನಿಗಾಗಿ ನಷ್ಟ ಪರಿಹಾರವನ್ನು ಸಂದಾಯ ಮಾಡತಕ್ಕುದು.

**41. ಅಗ್ನಿಶಾಮಕ ನೀರೆತ್ತುವ ಕೊಳವೆಗಳನ್ನು ಒದಗಿಸುವುದು:-** (1) ನೀರು ಸರಬರಾಜು ಇಂಜಿನಿಯರನು, ಹರಡಬಹುದಾದಂಥ ಯಾವುದೇ ಬೆಂಕಿಯನ್ನು ಆರಿಸುವುದಕ್ಕಾಗಿ ನೀರು ಸರಬರಾಜನ್ನು ಒದಗಿಸುವುದಕ್ಕಾಗಿ ಅತ್ಯಂತ ಅನುಕೂಲಕರವಾಗಬಹುದಾದಂಥ ಸ್ಥಳಗಳಲ್ಲಿ ನೀರಿನ ಪ್ರಧಾನ ಕೊಳವೆಗಳ ಮೇಲೆ (ಮುಖ್ಯ ಕೊಳವೆಗಳನ್ನು ಹೊರತುಪಡಿಸಿ) ನೀರೆತ್ತುವ ಕೊಳವೆಗಳನ್ನು ಜೋಡಿಸತಕ್ಕುದು ಮತ್ತು ಅವುಗಳನ್ನು ಸುಸ್ಥಿತಿಯಲ್ಲಿಡತಕ್ಕುದು ಮತ್ತು ಕಾಲಕಾಲಕ್ಕೆ ಅಂಥ ಪ್ರತಿಯೊಂದು ನೀರೆತ್ತುವ ಕೊಳವೆಯನ್ನು ನವೀಕರಿಸತಕ್ಕುದು.

(2) ಈ ಪ್ರಕರಣದ ಮೇರೆಗೆ ನೆಲೆಗೊಳಿಸಿದ ಪ್ರತಿಯೊಂದು ನೀರೆತ್ತುವ ಕೊಳವೆಯು ಇರುವ ಸ್ಥಳವನ್ನು ಸೂಚಿಸಲು ಅಂಥ ನೀರೆತ್ತುವ ಕೊಳವೆಯ ಸಮೀಪದ ಯಾವುದೇ ಗೋಡೆ, ಕಟ್ಟಡ ಅಥವಾ ಇತರ ರಚನೆಯ ಮೇಲೆ ಅಕ್ಷರಗಳು, ಗುರುತುಗಳು ಅಥವಾ ಅಂಕಿಗಳನ್ನು ಎದ್ದುಕಾಣುವ ಹಾಗೆ ಪ್ರದರ್ಶಿಸತಕ್ಕುದು.

(3) ಯಾವುದೇ ಅಂಥ ನೀರೆತ್ತುವ ಕೊಳವೆಯನ್ನು ಪೂರ್ಣಗೊಳಿಸಿದ ಕೂಡಲೇ ನೀರು ಸರಬರಾಜು ಇಂಜಿನಿಯರನು, ಸಾರ್ವಜನಿಕ ಅಗ್ನಿಶಾಮಕ ಇಂಜಿನನ್ನು ಇಟ್ಟಿರುವ ಪ್ರತಿಯೊಂದು ಸ್ಥಳದಲ್ಲಿ ಮತ್ತು ಅವನು ಅವಶ್ಯವೆಂದು ಭಾವಿಸುವಂಥ ಇತರ ಸ್ಥಳಗಳಲ್ಲಿ ಅದರ ಒಂದು ಬೀಗದ ಕೈಯನ್ನು ಇಡತಕ್ಕುದು.

(4) ಮಂಡಳಿಯು, ಕೊಳವೆಯನ್ನು (ಮುಖ್ಯ ಕೊಳವೆಯಾಗಿಲ್ಲದ ಮತ್ತು ನೀರೆತ್ತುವ ಕೊಳವೆಯನ್ನು ಒಯ್ಯುವ ಸಾಕಷ್ಟು ಉದ್ದಗಲವನ್ನು ಹೊಂದಿರುವ) ಹಾಕಲಾಗಿರುವಂಥ ಬೀದಿಯಲ್ಲಿ ಅಥವಾ ಅದರ ಸಮೀಪವಿರುವ ಯಾವುದೇ ಕಾರ್ಖಾನೆ, ಕಾರ್ಯಾಗಾರ, ವ್ಯಾಪಾರದ ಆವರಣ ಅಥವಾ ವ್ಯವಹಾರದ ಸ್ಥಳದ ಒಡೆಯ ಅಥವಾ ಅಧಿಭೋಗದಾರನ ಕೋರಿಕೆಯ ಮೇಲೆ ಅಥವಾ ಅವನ ವೆಚ್ಚದಲ್ಲಿ, ಆ ಕಾರ್ಖಾನೆ, ಕಾರ್ಯಾಗಾರ, ವ್ಯಾಪಾರದ ಆವರಣ ಅಥವಾ ವ್ಯವಹಾರದ ಸ್ಥಳಕ್ಕೆ ಅನುಕೂಲವಾಗಿ ಹತ್ತಿರವಾಗಿರಬಹುದಾದಂತೆ ಬೆಂಕಿಯನ್ನು ಆರಿಸುವುದಕ್ಕಾಗಿ ಮಾತ್ರವೇ ಉಪಯೋಗಿಸಬೇಕಾದ ಒಂದು ಅಥವಾ ಅದಕ್ಕಿಂತ ಹೆಚ್ಚಿನ ಅಗ್ನಿಶಾಮಕ ನೀರೆತ್ತುವ ಕೊಳವೆಗಳನ್ನು ಆ ಕೊಳವೆಯ ಮೇಲೆ ಜೋಡಿಸಬಹುದು ಮತ್ತು ಅವುಗಳನ್ನು ಸುಸ್ಥಿತಿಯಲ್ಲಿ ಇಡಬಹುದು ಮತ್ತು ಕಾಲಕಾಲಕ್ಕೆ ಅವುಗಳನ್ನು ನವೀಕರಿಸಬಹುದು.

(5) ಮಂಡಲಿಯು, ಯಾವುದೇ ಸಂದಾಯವಿಲ್ಲದೆ ನೀರೆತ್ತುವ ಕೊಳವೆಯನ್ನು ಯಾವುದರ ಮೇಲೆ ಜೋಡಿಸಲಾಗಿದೆಯೋ ಆ ಯಾವುದೇ ಕೊಳವೆಯಿಂದ ಬೆಂಕಿಯನ್ನು ಆರಿಸುವುದಕ್ಕಾಗಿ ನೀರನ್ನು ತೆಗೆದುಕೊಳ್ಳಲು ಎಲ್ಲಾ ವ್ಯಕ್ತಿಗಳಿಗೆ ಅವಕಾಶ ಮಾಡಿಕೊಡತಕ್ಕುದು.

**42. ಪಂಪುಗಳು, ಇತ್ಯಾದಿಗಳನ್ನು ಸ್ಥಾಪಿಸಲು ಆವರಣಗಳ ಒಡೆಯರನ್ನು ಅಗತ್ಯಪಡಿಸುವ ಅಧಿಕಾರ:-** ಮಂಡಲಿಯ ಜಲ ಕಾಮಗಾರಿಗಳೊಂದಿಗೆ ಸಂಪರ್ಕವಿರುವ ಪ್ರತಿಯೊಂದು ಆವರಣದ ಒಡೆಯನು, ಮಂಡಳಿಯು ಹಾಗೆ ಅಗತ್ಯಪಡಿಸಿದಾಗ, ಅಂಥ ಆವರಣದ ಅತ್ಯಂತ ಎತ್ತರದ ಮಹಡಿಯ ಮೇಲ್ಭಾಗಕ್ಕೆ ನೀರು ತಲುಪುವಂತೆ ಮಾಡಲು ಒಂದು ಸಂಪನ್ನು ಒದಗಿಸತಕ್ಕುದು ಮತ್ತು ವಿದ್ಯುತ್ ಪಂಪ್‌ಗಳು ಅಥವಾ ಇತರ ಸಾಧನಗಳನ್ನು ಸ್ಥಾಪಿಸತಕ್ಕುದು.

**43. ನೀರು ಸರಬರಾಜು:-** ನೀರು ಸರಬರಾಜು ಇಂಜಿನಿಯರನು, 44ನೇ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಅಗತ್ಯತೆಗಳು ಮತ್ತು ಈ ಬಗ್ಗೆ ರಚಿಸಿದ ನಿಯಮಗಳಲ್ಲಿ ವಿಧಿಸಿದ ಷರತ್ತುಗಳು ಯಾವುದಾದರೂ ಇದ್ದರೆ, ಅವುಗಳಿಗೆ ಒಳಪಟ್ಟು, ಮಂಡಳಿಯ ನೀರು ಸರಬರಾಜು ಗೃಹದಿಂದ ಅವನ ಗೃಹ ಬಳಕೆ ಉದ್ದೇಶಗಳಿಗಾಗಿ ನೀರು ಸರಬರಾಜು ಮಾಡಲು ಆ ಆವರಣಕ್ಕೆ ನೀರನ್ನು ಒಯ್ಯುವುದಕ್ಕಾಗಿ ಸರಬರಾಜು ಕೊಳವೆಗಳ ಮೂಲಕ ಆ ಆವರಣಕ್ಕೆ ಸಂಪರ್ಕವನ್ನುಂಟು ಮಾಡಲು ಯಾವುದೇ ಆವರಣದ ಒಡೆಯ, ಬಾಡಿಗೆದಾರ ಅಥವಾ ಅಧಿಭೋಗದಾರನಿಗೆ ಅನುಮತಿಯನ್ನು ಕೊಡಬಹುದು.

**44. ಸರಬರಾಜು ಕೊಳವೆಗಳನ್ನು ಹಾಕುವುದು, ಇತ್ಯಾದಿ:-** (1) ಮಂಡಳಿಯ ನೀರು ಸರಬರಾಜು ಗೃಹದಿಂದ ಅವನ ಗೃಹಬಳಕೆಯ ಉದ್ದೇಶಗಳಿಗಾಗಿ ನೀರು ಸರಬರಾಜನ್ನು ಪಡೆಯಲು ಇಚ್ಛಿಸುವ ಯಾವುದೇ ಆವರಣದ ಒಡೆಯ, ಬಾಡಿಗೆದಾರ ಅಥವಾ ಅಧಿಭೋಗದಾರನು ಈ ಕೆಳಕಂಡ ಅಗತ್ಯತೆಗಳನ್ನು ಪಾಲಿಸತಕ್ಕುದು, ಎಂದರೆ :-

(ಎ) ಅವನು, ಅವಶ್ಯಕ ಸರಬರಾಜು ಕೊಳವೆಯನ್ನು ಹಾಕುವ ಅವನ ಉದ್ದೇಶದ ಬಗ್ಗೆ ಹದಿನಾಲ್ಕು ದಿವಸಗಳ ನೋಟೀಸನ್ನು ಮಂಡಳಿಗೆ ಕೊಡತಕ್ಕುದು; ಮತ್ತು

(ಬಿ) ಅವನು, ಬೀದಿಯ ಭಾಗವಾಗಿರದ ಯಾವುದೇ ಭೂಮಿಗೆ ಸಂಬಂಧಿಸಿದಂತೆ ಅದರ ಒಡೆಯರು ಅಥವಾ ಅಧಿಭೋಗದಾರರ ಸಮ್ಮತಿಯನ್ನು ಮೊದಲು ಪಡೆದುಕೊಂಡು ಅವನ ಸ್ವಂತ ವೆಚ್ಚದಲ್ಲಿ ಸರಬರಾಜು ಕೊಳವೆಯನ್ನು ಹಾಕತಕ್ಕುದು:

ಪರಂತು, ಸರಬರಾಜು ಕೊಳವೆಯ ಯಾವುದೇ ಭಾಗವನ್ನು ಬೀದಿಯಲ್ಲಿ ಹಾಕಬೇಕಾಗಿರುವಲ್ಲಿ, ಅವನು ಆ ಬೀದಿಯನ್ನು ಸ್ವತಃ ಅಗೆಯತಕ್ಕುದಲ್ಲ ಅಥವಾ ಕೊಳವೆಯ ಆ ಭಾಗವನ್ನು ಹಾಕತಕ್ಕುದಲ್ಲ.

(2) (1)ನೇ ಉಪಪ್ರಕರಣದಲ್ಲಿ ಉಲ್ಲೇಖಿಸಲಾಗಿರುವಂತೆ ಅಂಥ ನೋಟೀಸನ್ನು ಸ್ವೀಕರಿಸಿದ ಮೇಲೆ, ಮಂಡಳಿಯು, [1][ಅದರ ಅಭಿಪ್ರಾಯದಲ್ಲಿ ಯಾವುದೇ ಆಕ್ಷೇಪಣೆಯು ಇಲ್ಲದಿದ್ದರೆ,][1] ಅವಶ್ಯಕ ಸಂಪರ್ಕ ಕೊಳವೆಯನ್ನು ಮತ್ತು ಬೀದಿಯಲ್ಲಿ ಹಾಕಬೇಕಾಗಿರುವಂಥ ಸರಬರಾಜು ಕೊಳವೆಯ ಯಾವುದೇ ಭಾಗವನ್ನು ಹಾಕತಕ್ಕುದು ಮತ್ತು ಸಂಪರ್ಕ ಕೊಳವೆಯನ್ನು ಸರಬರಾಜು ಕೊಳವೆಯೊಂದಿಗೆ ಕೂಡಿಸತಕ್ಕುದು.

(3) ಈ ಪ್ರಕರಣದ ಮೂಲಕ ಕಾರ್ಯಗತಗೊಳಿಸಲು ಅಗತ್ಯಪಡಿಸಿರುವ ಅಥವಾ ಅಧಿಕೃತಗೊಳಿಸಿರುವಂಥ ಕಾಮಗಾರಿಯನ್ನು ಕಾರ್ಯಗತಗೊಳಿಸುವಲ್ಲಿ ಮಂಡಳಿಯು, ಯುಕ್ತವಾಗಿ ವಹಿಸಿದ ವೆಚ್ಚಗಳನ್ನು, ಯಾರು ಆ ನೋಟೀಸನ್ನು ಕೊಟ್ಟಿರುವರೋ ಆ ವ್ಯಕ್ತಿಯು ಅದಕ್ಕೆ ಮರುಸಂದಾಯ ಮಾಡತಕ್ಕುದು ಮತ್ತು ಅದನ್ನು ಅಂಥ ವ್ಯಕ್ತಿಯಿಂದ ಈ ಅಧಿನಿಯಮದ ಮೇರೆಗೆ ನೀರು ದರದ ಬಾಕಿಯಂತೆ ವಸೂಲು ಮಾಡಬಹುದು:

ಪರಂತು, [2][ಮಂಡಳಿಯು ಸರಬರಾಜು ಕೊಳವೆಗೆ ಬದಲಾಗಿ ಪ್ರಧಾನ ಕೊಳವೆಯನ್ನು ಹಾಕುವುದು ಅವಶ್ಯವೆಂದು ಪರ್ಯಾಲೋಚಿಸಿದರೆ][2], ಸರಬರಾಜು ಕೊಳವೆಗೆ ಬದಲಾಗಿ ಆ ಪ್ರಧಾನ ಕೊಳವೆಯನ್ನು ಹಾಕುವಲ್ಲಿ ವಹಿಸಿದ ಹೆಚ್ಚುವರಿ ಖರ್ಚನ್ನು ಅವನು ಭರಿಸತಕ್ಕುದು.

1. 1966ರ ಅಧಿನಿಯಮ ಸಂಖ್ಯೆ 6ರ ಮೂಲಕ 17.3.1966 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

2. 1966ರ ಅಧಿನಿಯಮ ಸಂಖ್ಯೆ 6ರ ಮೂಲಕ 17.3.1966 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(4) ಈ ಪ್ರಕರಣದ ಹಿಂದೆ ಹೇಳಿದ ಉಪಬಂಧಗಳಲ್ಲಿ ಏನೇ ಅಡಕವಾಗಿದ್ದಾಗ್ಯೂ, ಮಂಡಳಿಯು ಅವನಿಗೆ ನೋಟೀಸನ್ನು ಜಾರಿ ಮಾಡಿದ ತರುವಾಯ ಯುಕ್ತ ಕಾಲದೊಳಗೆ ನೋಟೀಸನ್ನು ಕೊಡುವ ವ್ಯಕ್ತಿಯನ್ನು ಮಂಡಳಿಯು ಅಂದಾಜು ಮಾಡಿದಂತೆ ಕಾಮಗಾರಿಯ ಖರ್ಚನ್ನು ಅದಕ್ಕೆ ಮುಂಗಡವಾಗಿ ಸಂದಾಯ ಮಾಡಲು ಅಥವಾ ಅದಕ್ಕೆ ಸಮಾಧಾನವಾಗುವಂತೆ ಅದರ ಸಂದಾಯಕ್ಕಾಗಿ ಭದ್ರತೆಯನ್ನು ಕೊಡಲು ಅಗತ್ಯಪಡಿಸಬಹುದು.

(5) (4)ನೇ ಉಪಪ್ರಕರಣದ ಮೇರೆಗೆ ಮಂಡಳಿಗೆ ಮಾಡಿದ ಯಾವುದೇ ಸಂದಾಯವು, ನೋಟೀಸನ್ನು ಕೊಟ್ಟ ವ್ಯಕ್ತಿಯಿಂದ ವಸೂಲು ಮಾಡಲು ಅದು ಹಕ್ಕುಳ್ಳದ್ದಾಗಿರುವಂಥ ವೆಚ್ಚಗಳನ್ನು ಮೀರಿದರೆ ಆ ಹೆಚ್ಚಳವನ್ನು ಅದು ಮರು ಸಂದಾಯಮಾಡತಕ್ಕುದು ಮತ್ತು ಆ ವೆಚ್ಚಗಳು ಆ ಸಂದಾಯವನ್ನು ಒಳಗೊಳ್ಳದಿರುವಷ್ಟರ ಮಟ್ಟಿಗೆ ಮಂಡಳಿಯು ಆ ಶಿಲ್ಕನ್ನು ಅಂಥ ವ್ಯಕ್ತಿಯಿಂದ ಈ ಅಧಿನಿಯಮದ ಮೇರೆಗಿನ ನೀರಿನ ದರದ ಬಾಕಿಯಂತೆ ವಸೂಲುಮಾಡಬಹುದು.

**45. ಪ್ರತ್ಯೇಕ ಸರ್ವೀಸು ಪೈಪುಗಳನ್ನು ಅಗತ್ಯಪಡಿಸಲು ಅಧಿಕಾರ :–** (1) ಮಂಡಲಿಯು, ಅದು ನೀರನ್ನು ಸರಬರಾಜು ಮಾಡಿರುವ ಅಥವಾ ಮಾಡಬೇಕಾಗಿರುವ ಪ್ರತಿಯೊಂದು ಆವರಣಕ್ಕಾಗಿ ಪ್ರತ್ಯೇಕ ಸರ್ವೀಸು ಪೈಪನ್ನು ಒದಗಿಸುವುದನ್ನು ಅಗತ್ಯಪಡಿಸಬಹುದು.

(2) ಯಾವುದೇ ಆವರಣಕ್ಕೆ ಈಗಾಗಲೇ ನೀರನ್ನು ಸರಬರಾಜು ಮಾಡಲಾಗಿದ್ದ, ಆದರೆ ಅದಕ್ಕೆ ಪ್ರತ್ಯೇಕ ಸರ್ವೀಸು ಪೈಪು ಇಲ್ಲದಿರುವ ಸಂದರ್ಭದಲ್ಲಿ ಮಂಡಳಿಯು, ಅಂಥ ಕೊಳವೆಯನ್ನು ಒದಗಿಸುವುದನ್ನು ಅಗತ್ಯಪಡಿಸಿ ಆ ಆವರಣದ ಒಡೆಯನಿಗೆ ನೋಟೀಸನ್ನು ಕೊಟ್ಟರೆ, ಆ ಒಡೆಯನು, ಮೂರು ತಿಂಗಳುಗಳೊಳಗೆ ಸರಬರಾಜು ಪೈಪು ಆಗುವಷ್ಟು ಮತ್ತು ಬೀದಿಯಲ್ಲಿ ಹಾಕಬೇಕಾದ ಅಗತ್ಯವಿಲ್ಲದಿರುವಷ್ಟು ಅಗತ್ಯವಾದ ಪೈಪನ್ನು ಹಾಕತಕ್ಕುದು ಮತ್ತು ಮಂಡಲಿಯು, ಒಡೆಯನು ಹಾಗೆ ಮಾಡಿದ ತರುವಾಯ ಹದಿನಾಲ್ಕು ದಿವಸಗಳೊಳಗೆ ಸಂಪರ್ಕ ಕೊಳವೆ ಅಥವಾ ಬೀದಿಯಲ್ಲಿ ಹಾಕಬೇಕಾದ ಸಂಪರ್ಕ ಕೊಳವೆ ಅಥವಾ ಸರಬರಾಜು ಕೊಳವೆ ಆಗುವಷ್ಟು ಅಗತ್ಯವಾದ ಕೊಳವೆಯನ್ನು ಹಾಕತಕ್ಕುದು ಮತ್ತು ಎಲ್ಲಾ ಅವಶ್ಯಕ ಸಂಪರ್ಕಗಳನ್ನು ಒದಗಿಸತಕ್ಕುದು.

(3) (2)ನೇ ಉಪಪ್ರಕರಣದ ಮೇರೆಗೆ ಯಾರಿಗೆ ನೋಟೀಸನ್ನು ಜಾರಿ ಮಾಡಲಾಗಿದೆಯೋ ಆ ಒಡೆಯನು ಅದನ್ನು ಪಾಲಿಸಲು ತಪ್ಪಿದರೆ, ಮಂಡಲಿಯು, ಒಡೆಯನನ್ನು ಕಾರ್ಯಗತಗೊಳಿಸಲು ಅಗತ್ಯಪಡಿಸಲಾಗಿದ್ದಂಥ ಕಾಮಗಾರಿಯನ್ನು ಖುದ್ದಾಗಿ ಕಾರ್ಯಗತಗೊಳಿಸಬಹುದು ಮತ್ತು ಆ ಕಾಮಗಾರಿಯನ್ನು ಕಾರ್ಯಗತಗೊಳಿಸುವಲ್ಲಿ ಅದು ಯುಕ್ತವಾಗಿ ವಹಿಸಿರುವ ವೆಚ್ಚಗಳನ್ನು ಈ ಅಧಿನಿಯಮದ ಮೇರೆಗಿನ ನೀರಿನ ದರದ ಬಾಕಿಯಂತೆ ವಸೂಲು ಮಾಡಬಹುದು.

**46. ನಿಲು ಬಿರುಡೆಗಳು :–** (1) ಈ ಅಧ್ಯಾಯವು ಜಾರಿಗೆ ಬಂದ ದಿನಾಂಕದ ತರುವಾಯ ಹಾಕಲಾದ ಪ್ರತಿಯೊಂದು ಸರ್ವೀಸು ಪೈಪಿನ ಮೇಲೆ ಮಂಡಳಿಯು, ಮುಚ್ಚಿದ ಪೆಟ್ಟಿಗೆ ಅಥವಾ ಯುಕ್ತವಾಗಿ ಅವಶ್ಯಕವಾಗಬಹುದಾದಂಥ ಗಾತ್ರದ ಗುಂಡಿಯಲ್ಲಿ ಮುಚ್ಚಿದ ನಿಲುಬಿರುಡೆಯನ್ನು ಜೋಡಿಸತಕ್ಕುದು ಮತ್ತು ಅಂಥ ದಿನಾಂಕಕ್ಕೆ ಮುಂಚೆ ಹಾಕಲಾದ ಪ್ರತಿಯೊಂದು ಸರ್ವೀಸು ಪೈಪಿನ ಮೇಲೆ ಮಂಡಲಿಯು ಅದನ್ನು ಜೋಡಿಸಬಹುದು.

(2) ಈ ಅಧ್ಯಾಯವು ಜಾರಿಗೆ ಬಂದ ದಿನಾಂಕದ ತರುವಾಯ ಸರ್ವೀಸು ಪೈಪಿನ ಮೇಲೆ ಜೋಡಿಸಿದ ಪ್ರತಿಯೊಂದು ನಿಲುಬಿರುಡೆಯನ್ನು ಮಂಡಳಿಯು ಅತ್ಯಂತ ಅನುಕೂಲಕರವೆಂದು ಭಾವಿಸುವಂಥ ಜಾಗದಲ್ಲಿ ನೆಲೆಗೊಳಿಸತಕ್ಕುದು:

ಪರಂತು, -

(ಎ) ಖಾಸಗಿ ಆವರಣದಲ್ಲಿನ ನಿಲುಬಿರುಡೆಯನ್ನು ಆ ಸರ್ವೀಸು ಪೈಪು ಆ ಆವರಣವನ್ನು ಪ್ರವೇಶಿಸುವುದರಿಂದ ಬೀದಿಗೆ ಸಾಧ್ಯವಾಗುವಷ್ಟರ ಮಟ್ಟಿಗೆ ಹತ್ತಿರದಲ್ಲಿ ನೆಲೆಗೊಳಿಸತಕ್ಕುದು; ಮತ್ತು

(ಬಿ) ಬೀದಿಯಲ್ಲಿನ ಒಂದು ನಿಲುಬಿರುಡೆಯನ್ನು ಸಾಧ್ಯವಾಗಬಹುದಾದಷ್ಟು ಮಟ್ಟಿಗೆ ಅದರ ಗಡಿಗೆ ಹತ್ತಿರದಲ್ಲಿ ನೆಲೆಗೊಳಿಸತಕ್ಕುದು.

**47. ಮೀಟರ್‌ಗಳನ್ನು ಒದಗಿಸಲು ಅಧಿಕಾರ:–** (1) ಮಂಡಳಿಯು, ನೀರಿನ ಮೀಟರ್‌ನ್ನು ಒದಗಿಸಬಹುದು ಮತ್ತು ಅದನ್ನು ಮಂಡಳಿಯ ನೀರು ಸರಬರಾಜು ಗೃಹಕ್ಕೆ ಜೋಡಿಸಲಾಗಿರುವ ಆವರಣಗಳಲ್ಲಿನ ಸರ್ವೀಸು ಪೈಪಿಗೆ ಲಗತ್ತಿಸಬಹುದು.

[1][(2) ಮೀಟರ್‌ಗಳ ಬೆಲೆ, ಅವುಗಳ ಸ್ಥಾಪನೆಯ ವೆಚ್ಚಗಳು ಮತ್ತು ಮೀಟರ್ ಬಳಕೆಗಾಗಿ ಸಂದಾಯಮಾಡಬೇಕಾದ ಬಾಡಿಗೆ ಇವುಗಳು ವಿನಿಯಮಗಳ ಮೂಲಕ ನಿಯಮಿಸಬಹುದಾದಂಥವು ಆಗಿರತಕ್ಕುದು ಮತ್ತು ಆ ಆವರಣದ ಒಡೆಯನು ಅವುಗಳನ್ನು ಸಂದಾಯ ಮಾಡತಕ್ಕುದು.][1]

[1][(3) ಮೀಟರ್‌ಗಳ ಬಳಕೆ, ನಿರ್ವಹಣೆ ಮತ್ತು ಪರೀಕ್ಷೆಯನ್ನು ಈ ಬಗ್ಗೆ ರಚಿಸಿದ ಉಪವಿಧಿಗಳ ಮೂಲಕ ನಿಯಂತ್ರಿತಗೊಳಿಸತಕ್ಕುದು.][1]

**48. ಮೀಟರ್‌ಗಳು ಸರಿಯಾಗಿರುವುದರ ಬಗ್ಗೆ ಪೂರ್ವಭಾವನೆ:–** ಮೀಟರಿನ ಮೂಲಕ, ಈ ಅಧಿನಿಯಮದ ಮೇರೆಗೆ ನೀರನ್ನು ಸರಬರಾಜು ಮಾಡಿದಾಗಲೆಲ್ಲ, ತದ್ವಿರುದ್ಧವಾದುದನ್ನು ರುಜುವಾತುಪಡಿಸುವವರೆಗೆ, ಆ ಮೀಟರ ಸೂಚಿಸುವ ಪ್ರಮಾಣದ ನೀರನ್ನು ಉಪಯೋಗಿಸಲಾಗಿದೆ ಎಂದು ಪೂರ್ವಭಾವನೆ ಮಾಡತಕ್ಕುದು.

**49. ನೀರಿನ ಪೋಲು ಅಥವಾ ದುರುಪಯೋಗದ ನಿಷೇಧ:–** (1) ಯಾವನೇ ವ್ಯಕ್ತಿಯು, ಅವನು ಇಟ್ಟುಕೊಂಡು ಬರಲು ಹೊಣೆಗಾರನಾಗಿರುವ ಯಾವುದೇ ನೀರಿನ ಯಾವುದೇ ಜೋಡಣೆಯನ್ನು ಬುದ್ಧಿಪೂರ್ವಕವಾಗಿ ಅಥವಾ ನಿರ್ಲಕ್ಷತೆಯಿಂದ ಮಂಡಲಿಯು ಅವನಿಗೆ ಸರಬರಾಜು ಮಾಡಿದ ನೀರು ಪೋಲಾಗುವಂತೆ ಅಥವಾ ದುರುಪಯೋಗವಾಗುವಂತೆ ಅಥವಾ ಅನುಚಿತವಾಗಿ ಬಳಕೆಯಾಗುವಂತೆ

1. 1966ರ ಅಧಿನಿಯಮ ಸಂಖ್ಯೆ 6ರ ಮೂಲಕ 17.3.1966 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

ಅಥವಾ ಉಪಯೋಗಕ್ಕೆ ಮುಂಚೆ ಮಲಿನವಾಗುವಂತೆ ಅಥವಾ ಕಲುಷಿತ ವಸ್ತುವು ಮಂಡಲಿಗೆ ಸೇರಿದ ಯಾವುದೇ ಕೊಳವೆಗೆ ಅಥವಾ ಮಂಡಲಿಗೆ ಸೇರಿದ ಕೊಳವೆಗೆ ಜೋಡಿಸಿದ ಯಾವುದೇ ಕೊಳವೆಯೊಳಕ್ಕೆ ಮರಳಿ ಬರುವ ಸಂಭವವಿರುವಂತೆ ಅಥವಾ ಇವುಗಳಾಗುವ ಸಂಭವವಿರುವಂತೆ, -

(ಎ) ಕೆಟ್ಟುಹೋಗಿರುವಂತೆ ಅಥವಾ ಹಾಗೆ ಇರುವಂತೆ ಅಥವಾ ಹಾಗೆ ದುರಸ್ತಿಯ ಅವಶ್ಯವಿರುವಂತೆ; ಅಥವಾ

(ಬಿ) ಹಾಗೆ ನಿರ್ಮಿಸಿರುವಂತೆ ಅಥವಾ ಹಾಗೆ ಉಳಿಯಲು ಅಥವಾ ಹಾಗೆ ಅಳವಡಿಸಿರುವಂತೆ ಅಥವಾ ಹಾಗೆ ಉಪಯೋಗಿಸುವಂತೆ ಮಾಡತಕ್ಕುದಲ್ಲ ಅಥವಾ ಮಾಡಲು ಎಡೆಗೊಡತಕ್ಕುದಲ್ಲ.

(2) ಯಾವನೇ ವ್ಯಕ್ತಿಯು ಇಟ್ಟುಕೊಂಡು ಬರಲು ಹೊಣೆಗಾರನಾಗಿರುವಂಥ ಯಾವುದೇ ನೀರಿನ ಜೋಡಣೆಯು ಹಿಂದೆ ಹೇಳಿದಂಥ ಸ್ಥಿತಿಯಲ್ಲಿದ್ದರೆ ಅಥವಾ ಹಾಗೆ ನಿರ್ಮಿಸಲಾಗಿದ್ದರೆ ಅಥವಾ ಅಳವಡಿಸಲಾಗಿದ್ದರೆ, ಮಂಡಳಿಯು, ಈ ಅಧಿನಿಯಮದ ಯಾವುದೇ ಇತರ ಉಪಬಂಧದ ಮೇರೆಗೆ ಆ ವ್ಯಕ್ತಿಯ ವಿರುದ್ಧ ಯಾವುದೇ ಕ್ರಮಕ್ಕೆ ಬಾಧಕವಾಗದಂತೆ ಆ ವ್ಯಕ್ತಿಯನ್ನು ಯಾವುದೇ ಅವಶ್ಯ ದುರಸ್ತಿಗಳು ಅಥವಾ ಬದಲಾವಣೆಗಳನ್ನು ಕಾರ್ಯಗತಗೊಳಿಸಲು ಅಗತ್ಯ ಪಡಿಸಬಹುದು ಮತ್ತು ಅವನು ನಲವತ್ತೆಂಟು ಗಂಟೆಗಳೊಳಗೆ ಹಾಗೆ ಮಾಡಲು ತಪ್ಪಿದರೆ, ಕಾಮಗಾರಿಯನ್ನು ತಾವೇ ಕಾರ್ಯಗತಗೊಳಿಸಬಹುದು ಮತ್ತು ಹಾಗೆ ಮಾಡುವಲ್ಲಿ ಅದು ಯುಕ್ತವಾಗಿ ವಹಿಸಿದ ವೆಚ್ಚಗಳನ್ನು ಅವನಿಂದ ಈ ಅಧಿನಿಯಮದ ಮೇರೆಗೆ ಸಂದಾಯ ಮಾಡಬೇಕಾದ ನೀರುದರದ ಬಾಕಿಯಂತೆ ವಸೂಲು ಮಾಡಬಹುದು.

**50. ನೀರಿನ ಪೋಲು ಅಥವಾ ದುರುಪಯೋಗವನ್ನು ಪತ್ತೆ ಮಾಡಲು ಆವರಣವನ್ನು ಪ್ರವೇಶಿಸುವ ಅಧಿಕಾರ:–** ನೀರು ಸರಬರಾಜು ಇಂಜಿನಿಯರನು ಅಥವಾ ಮಂಡಳಿಯು, ಅಧಿಕೃತಗೊಳಿಸಿದ ಯಾವನೇ ಅಧಿಕಾರಿಯು, ಸೂರ್ಯೋದಯ ಮತ್ತು ಸೂರ್ಯಾಸ್ತದ ನಡುವೆ ಅಂಥ ನೀರಿನ ಯಾವುದೇ ಪೋಲು ಅಥವಾ ದುರುಪಯೋಗವು ಇದೆಯೋ ಎಂಬ ಬಗ್ಗೆ ಪರೀಕ್ಷಿಸಲು ಮಂಡಳಿಯು ನೀರನ್ನು ಸರಬರಾಜು ಮಾಡುವ ಯಾವುದೇ ಆವರಣವನ್ನು ಪ್ರವೇಶಿಸಬಹುದು ಮತ್ತು ನೀರು ಸರಬರಾಜು ಇಂಜಿನಿಯರನು ಅಥವಾ ಅಂಥ ಅಧಿಕಾರಿಗೆ ಆ ಆವರಣದ ಪ್ರವೇಶವನ್ನು ನಿರಾಕರಿಸತಕ್ಕುದಲ್ಲ ಅಥವಾ ಅವನು ಪರೀಕ್ಷೆಯನ್ನು ನಡೆಸುವಲ್ಲಿ ಯಾವನೇ ವ್ಯಕ್ತಿಯು ಅಡ್ಡಿಯನ್ನುಂಟುಮಾಡತಕ್ಕುದಲ್ಲ.

**51. ನೀರಿನ ಜೋಡಣೆಗಳನ್ನು ಪರೀಕ್ಷಿಸಲು ಅಧಿಕಾರ:–** ಮಂಡಳಿಯು, ಸರಬರಾಜು ಮಾಡುವ ನೀರಿಗೆ ಸಂಬಂಧಿಸಿದಂತೆ ಉಪಯೋಗಿಸಿದ ಯಾವುದೇ ನೀರಿನ ಜೋಡಣೆಯನ್ನು ಪರೀಕ್ಷಿಸಬಹುದು.

**52. ನೀರಿನ ಕೊಳವೆಗಳು ಮುಂತಾದುವುಗಳನ್ನು, ನೀರು ಕಲುಷಿತಗೊಳ್ಳಬಹುದಾದ ಸ್ಥಳದಲ್ಲಿ ನೆಲೆಗೊಳಿಸತಕ್ಕುದಲ್ಲ:–** (1) ಯಾವುವೇ ನೀರಿನ ಕೊಳವೆಗಳನ್ನು ಚರಂಡಿಯಲ್ಲಿ ತೆರೆದ ನಾಲೆಯ ಮೇಲ್ಭಾಗದಲ್ಲಿ ಅಥವಾ ಮನೆಯ ಗಲ್ಲಿ ಅಥವಾ ರೊಚ್ಚುಗುಂಡಿಯಿಂದ ಆರು ಮೀಟರುಗಳ ಒಳಗೆ ಅಥವಾ ಆ ಕೊಳವೆಯು ಹಾನಿಗೊಳಗಾಗಬಹುದಾದ ಅಥವಾ ಅದರಲ್ಲಿನ ನೀರು ಕಲುಷಿತಗೊಳ್ಳಬಹುದಾದ ಸಂಭವವಿರುವ ಯಾವುದೇ ಸ್ಥಳದಲ್ಲಿ ಹಾಕತಕ್ಕುದಲ್ಲ; ಮತ್ತು ಮಂಡಳಿಯ ಅನುಮೋದನೆಯೊಂದಿಗೆ ಹೊರತು ಯಾವುದೇ ನೀರಿನ ತೊಟ್ಟಿಯನ್ನು, ಕಕ್ಕಸು ಅಥವಾ ರೊಚ್ಚು ಗುಂಡಿಯಿಂದ ಆರು ಮೀಟರುಗಳ ಒಳಗೆ ನಿರ್ಮಿಸತಕ್ಕುದಲ್ಲ.

(2) ಯಾವುದೇ ಕಕ್ಕಸು ಅಥವಾ ರೊಚ್ಚುಗುಂಡಿಯನ್ನು ಯಾವುದೇ ನೀರಿನ ಕೊಳವೆ ಅಥವಾ ನೀರಿನ ತೊಟ್ಟಿಯಿಂದ ಆರು ಮೀಟರುಗಳ ಒಳಗೆ ಅಥವಾ ಆ ಕೊಳವೆ ಅಥವಾ ನೀರಿನ ತೊಟ್ಟಿಯು ಹಾನಿಗೊಳ್ಳುವ ಅಥವಾ ಅದರಲ್ಲಿನ ನೀರು ಕಲುಷಿತವಾಗುವ ಸಂಭವವಿರುವ ಯಾವುದೇ ಸ್ಥಳದಲ್ಲಿ ನಿರ್ಮಿಸತಕ್ಕುದಲ್ಲ ಅಥವಾ ರಚಿಸತಕ್ಕುದಲ್ಲ.

**53. ನೀರು ಸರಬರಾಜನ್ನು ನಿಲ್ಲಿಸುವ ಅಧಿಕಾರ:–** (1) ಮಂಡಳಿಯು ಯಾವುದೇ ಆವರಣಗಳಿಗೆ ನೀರಿನ ಸರಬರಾಜನ್ನು,-

(ಎ) ಆವರಣಗಳು ಅಧಿಭೋಗದಲ್ಲಿಲ್ಲದಿದ್ದರೆ;

(ಬಿ) ಒಡೆಯ ಅಥವಾ ಅಧಿಭೋಗದಾರನು, ನೀರು ಸರಬರಾಜಿನ ಬಗ್ಗೆ ಮಂಡಲಿಯು ಹೊರಡಿಸಿದ ಯಾವುದೇ ಕಾನೂನುಬದ್ಧ ಆದೇಶ ಅಥವಾ ಕಡ್ಡಾಯ ಕೋರಿಕೆಯನ್ನು ಅದರಲ್ಲಿ ನಿರ್ದಿಷ್ಟಪಡಿಸಿದ ಅವಧಿಯೊಳಗೆ ಪಾಲಿಸಲು ಉಪೇಕ್ಷಿಸಿದರೆ;

(ಸಿ) ಈ ಅಧಿನಿಯಮದ ಮೂಲಕ ಅಥವಾ ಅದರ ಮೇರೆಗೆ ಯಾವನೇ ವ್ಯಕ್ತಿಗೆ ವಿಧಿಸಬಹುದಾದಂಥ ನೀರಿಗಾಗಿ ಬಾಕಿಯಾದ ಯಾವುವೇ ಚಾರ್ಜುಗಳು ಅಥವಾ ಯಾವುದೇ ಇತರ ಮೊತ್ತ ಅಥವಾ ಜೋಡಣೆಯನ್ನು ಮಾಡುವುದಕ್ಕಾಗಿನ ಖರ್ಚು ಅಥವಾ ಮೀಟರಿನ ಬಾಡಿಗೆ ಅಥವಾ ನೀರು ಸರಬರಾಜಿಗೆ ಸಂಬಂಧಿಸಿದ ಯಾವುದೇ ಕೆಲಸ ಅಥವಾ ಪರೀಕ್ಷೆಯನ್ನು ಕಾರ್ಯಗತಗೊಳಿಸುವ ಖರ್ಚಿಗಾಗಿ ಅಂಥ ಚಾರ್ಜುಗಳು ಅಥವಾ ಮೊತ್ತಗಳಿಗಾಗಿನ ಬಿಲ್ಲನ್ನು ಕೊಟ್ಟ ಅಥವಾ ಜಾರಿ ಮಾಡಿದ ಹದಿನೈದು ದಿವಸಗಳಲ್ಲಿ ಸಂದಾಯಮಾಡದಿದ್ದರೆ;

(ಡಿ) ಅವನನ್ನು ಹಾಗೆ ಮಾಡದಿರುವಂತೆ ಅಗತ್ಯಪಡಿಸುವ ನೋಟೀಸನ್ನು ಮಂಡಳಿಯಿಂದ ಸ್ವೀಕರಿಸಿದ ತರುವಾಯ ಆ ಒಡೆಯ ಅಥವಾ ಅಧಿಭೋಗದಾರನು ಈ ಅಧಿನಿಯಮದ ಉಪಬಂಧಗಳು ಅಥವಾ ಅದರ ಮೇರೆಗೆ ರಚಿಸಿದ ಯಾವುದೇ ನಿಯಮವನ್ನು ಉಲ್ಲಂಘಿಸಿ ನೀರಿನ ಉಪಯೋಗವನ್ನು ಮುಂದುವರಿಸಿದರೆ ಅಥವಾ ಅದನ್ನು ಉಪಯೋಗಿಸಲು ಅನುಮತಿಸಿದರೆ;

(ಇ) ಆ ಒಡೆಯ ಅಥವಾ ಅಧಿಭೋಗದಾರನು ಬುದ್ಧಿಪೂರ್ವಕವಾಗಿ ಅಥವಾ ನಿರ್ಲಕ್ಷ್ಯದಿಂದ ಅವನ ಮೀಟರು ಪೈಪು ಅಥವಾ ನೀರನ್ನು ಒಯ್ಯುವ ಯಾವುದೇ ಕೊಳವೆ ಪೈಪು ಅಥವಾ ಕೊಳಾಯಿಗೆ ಹಾನಿಯನ್ನುಂಟು ಮಾಡಿದರೆ;

(ಎಫ್) ಒಡೆಯ ಅಥವಾ ಅಧಿಭೋಗದಾರನು ಯಾವುದೇ ಕಾಮಗಾರಿಯನ್ನು ಕಾರ್ಯಗತಗೊಳಿಸುವ ಅಥವಾ ಯಾವುದೇ ಉಪಕರಣಗಳನ್ನು ನೆಲೆಗೊಳಿಸುವ ಅಥವಾ ತೆಗೆದುಹಾಕುವ ಅಥವಾ ನೀರು ಸರಬರಾಜಿಗೆ ಸಂಬಂಧಿಸಿದಂತೆ ಯಾವುದೇ ಪರೀಕ್ಷೆ ಅಥವಾ ವಿಚಾರಣೆಯನ್ನು ನಡೆಸುವ ಈ ಉದ್ದೇಶಕ್ಕಾಗಿ ಮಂಡಳಿ ಅಥವಾ ಈ ಬಗ್ಗೆ ಅದು ಅಧಿಕೃತಗೊಳಿಸಿದ ಯಾವನೇ ವ್ಯಕ್ತಿಯು ಅದು ಅಥವಾ

ಅವನು ಪ್ರವೇಶಿಸಲು ಉದ್ದೇಶಿಸುವಂಥ ಆವರಣದೊಳಕ್ಕೆ ಪ್ರವೇಶಿಸುವುದನ್ನು ನಿರಾಕರಿಸಿದರೆ ಅಥವಾ ಅಂಥ ಕಾಮಗಾರಿಯನ್ನು ಮಾಡುವ ಅಂಥ ಉಪಕರಣವನ್ನು ನೆಲೆಗೊಳಿಸುವ ಅಥವಾ ತೆಗೆದುಹಾಕುವ ಅಥವಾ ಅಂಥ ಪರೀಕ್ಷೆ ಅಥವಾ ವಿಚಾರಣೆಯನ್ನು ನಡೆಸುವ ನೀರು ಸರಬರಾಜು ಇಂಜಿನಿಯರ್ ಅಥವಾ ಮಂಡಳಿಯು ಅಧಿಕೃತಗೊಳಿಸದ ಯಾವನೇ ವ್ಯಕ್ತಿಯನ್ನು ಪ್ರತಿಬಂಧಿಸಿದರೆ;

(ಹೆಚ್) ಮಂಡಳಿಗೆ ಅಥವಾ ಅದು ಅಧಿಕೃತಗೊಳಿಸಿದ ಯಾವನೇ ವ್ಯಕ್ತಿಗೆ ನೀರು ಸರಬರಾಜಿಗೆ ಸಂಬಂಧಿಸಿದ ಯಾವುದೇ ಕೊಳವೆಗಳು, ಕೊಳಾಯಿಗಳು, ಕಾಮಗಾರಿಗಳು ಅಥವಾ ಜೋಡಣೆಗಳು ಪರೀಕ್ಷೆಯನ್ನು ನಡೆಸಿದ ಮೇಲೆ ನೀರಿನ ಪೋಲು ಅಥವಾ ಮಲಿನತೆಯನ್ನುಂಟು ಮಾಡುವಷ್ಟರಮಟ್ಟಿಗೆ ದುರಸ್ತಿಯಲ್ಲಿಲ್ಲವೆಂದು ಕಂಡುಬಂದರೆ;

(ಜ) ಒಡೆಯ ಅಥವಾ ಅಧಿಭೋಗದಾರನು ಈ ಅಧಿನಿಯಮದ ಉಪಬಂಧಗಳು ಅಥವಾ ಅದರ ಮೇರೆಗೆ ರಚಿಸಿದ ನಿಯಮಗಳು ಅಥವಾ ವಿನಿಯಮಗಳನ್ನು ಉಲ್ಲಂಘಿಸಿ ಮಂಡಳಿಯ ನೀರು ಸರಬರಾಜಿಗೆ ಸಂಬಂಧಪಟ್ಟ ಕೊಳವೆಗಳು, ಕೊಳಾಯಿಗಳು, ಕಾಮಗಾರಿಗಳು ಅಥವಾ ಜೋಡಣೆಗಳನ್ನು ನೆಲೆಗೊಳಿಸುವಂತೆ, ತೆಗೆದುಹಾಕುವಂತೆ, ದುರಸ್ತಿ ಮಾಡುವಂತೆ ಅಥವಾ ಅನ್ಯಥಾ ಹಸ್ತಕ್ಷೇಪ ಮಾಡಿದರೆ

- ನಿಲ್ಲಿಸಬಹುದು :

ಪರಂತು, ಮಂಡಳಿಯು ಆವರಣದ ಒಡೆಯ ಅಥವಾ ಅಧಿಭೋಗದಾರನಿಗೆ ಮೂರು ದಿವಸಗಳಿಗಿಂತ ಕಡಿಮೆಯಿಲ್ಲದ ನೋಟೀಸನ್ನು ಕೊಟ್ಟಿದ್ದ ಹೊರತು ನೀರು ಸರಬರಾಜನ್ನು ನಿಲ್ಲಿಸತಕ್ಕುದಲ್ಲ.

(2) (ಎ) ಆವರಣಗಳ ಒಡೆಯ ಅಥವಾ ಅಧಿಭೋಗದಾರನು (1)ನೇ ಉಪ ಪ್ರಕರಣದ (ಸಿ) ಖಂಡದಲ್ಲಿ ಉಲ್ಲೇಖಿಸಿದ ಎಲ್ಲ ಮೊತ್ತಗಳನ್ನು ಸಂದಾಯ ಮಾಡುವುದಕ್ಕಾಗಿ ಜಂಟಿಯಾಗಿ ಅಥವಾ ಪ್ರತ್ಯೇಕವಾಗಿ ಹೊಣೆಗಾರನಾಗಿರತಕ್ಕುದು.

(ಬಿ)(ಎ) ಖಂಡದಲ್ಲಿ ಉಲ್ಲೇಖಿಸಿದ ಮೊತ್ತಗಳು ಆ ಆವರಣಗಳ ಮೇಲೆ ಋಣಭಾರವಾಗಿರತಕ್ಕುದು.

(3) ಸರಬರಾಜನ್ನು ನಿಲ್ಲಿಸುವ ಬಗ್ಗೆ ಆದ ವೆಚ್ಚಗಳನ್ನು ಆವರಣಗಳ ಒಡೆಯ ಮತ್ತು ಅಧಿಭೋಗದಾರನು ಜಂಟಿಯಾಗಿ ಮತ್ತು ಪ್ರತ್ಯೇಕವಾಗಿ ಸಂದಾಯ ಮಾಡತಕ್ಕುದು.

(4) (1)ನೇ ಉಪಪ್ರಕರಣದ (ಸಿ) ಖಂಡದ ಮೇರೆಗೆ ಸರಬರಾಜನ್ನು ನಿಲ್ಲಿಸಿದ ವೆಚ್ಚಗಳೊಂದಿಗೆ ನೀರನ್ನು ನಿಲ್ಲಿಸಿರುವ ಬಗ್ಗೆ ಯಾವುದನ್ನು ಸಂದಾಯಮಾಡದಿರುವುದಕ್ಕಾಗಿ ಯಾವುದೇ ಹಣವನ್ನು ಆ ಒಡೆಯ ಅಥವಾ ಅಧಿಭೋಗದಾರನು ಸಂದಾಯ ಮಾಡಿದ ಸಂದರ್ಭದಲ್ಲಿ ಆದಷ್ಟು ಬೇಗ ಮಂಡಳಿಯು ನೀರು ಸರಬರಾಜು ಗೃಹಕ್ಕೆ ಆವರಣವನ್ನು ಮರುಜೋಡಿಸಿದ ವೆಚ್ಚವನ್ನು ಸಂದಾಯಮಾಡಿದ ಮೇಲೆ ಮುಂಚಿನಂತೆ ನೀರು ಸರಬರಾಜು ಮಾಡುವಂತೆ ಮಾಡತಕ್ಕುದು.

(5) ಯಾವನೇ ವ್ಯಕ್ತಿಯ ವಿರುದ್ಧ ಈ ಪ್ರಕರಣದ ಮೇರೆಗೆ ಕೈಗೊಂಡ ಯಾವುದೇ ಕ್ರಮವು, ಅವನು ಅನ್ಯಥಾ ಹೊಣೆಗಾರನಾಗಬಹುದಾದಂಥ ಯಾವುವೇ ದಂಡನೆಗಳಿಗೆ ಬಾಧಕವನ್ನುಂಟು ಮಾಡತಕ್ಕುದಲ್ಲ.

**54. ನೀರು ಸರಬರಾಜಿಗೆ ಸಂಬಂಧಪಟ್ಟಂತೆ ಅಪರಾಧಕ್ಕಾಗಿ ಒಡೆಯರು ಮತ್ತು ಅಧಿಭೋಗದಾರರ ಜಂಟಿ ಮತ್ತು ಪ್ರತ್ಯೇಕ ಹೊಣೆಗಾರಿಕೆ :-** ಮಂಡಳಿಯ ನೀರು ಸರಬರಾಜು ಗೃಹಕ್ಕೆ ಸಂಬಂಧಿಸಿದ ಯಾವುದೇ ಆವರಣದ ಮೇಲೆ ಈ ಅಧಿನಿಯಮದ ಮೇರೆಗೆ ನೀರು ಸರಬರಾಜಿಗೆ ಸಂಬಂಧಪಟ್ಟ ಯಾವುದೇ ಅಪರಾಧವನ್ನು ಮಾಡಿದರೆ ಒಡೆಯ, ನೀರಿಗಾಗಿನ ಚಾರ್ಜುಗಳನ್ನು ಸಂದಾಯಮಾಡುವುದಕ್ಕಾಗಿ ಮುಖ್ಯವಾಗಿ ಹೊಣೆಗಾರನಾಗಿರುವ ವ್ಯಕ್ತಿ ಮತ್ತು ಸದರಿ ಆವರಣಗಳ ಅಧಿಬೋಗದಾರನು ಜಂಟಿಯಾಗಿ ಮತ್ತು ಪ್ರತ್ಯೇಕವಾಗಿ ಅಂಥ ಅಪರಾಧಕ್ಕಾಗಿ ಗುರಿಯಾಗತಕ್ಕುದು.

**55. ಸರಬರಾಜನ್ನು ಕಡಿಮೆ ಮಾಡಿದ ಅಥವಾ ಸರಬರಾಜನ್ನು ಮಾಡದಿದ್ದ ಕೆಲವು ಸಂದರ್ಭಗಳಲ್ಲಿ ಮಂಡಳಿಯ ಹೊಣೆಗಾರಿಕೆ ಇಲ್ಲದಿರುವುದು :-** ಮಂಡಳಿಯು, ಸಾಮಾನ್ಯ ಅನಾವೃಷ್ಟಿ ಇತರ ಅನಿವಾರ್ಯಕಾರಣ ಅಥವಾ ಅಪಘಾತ ಅಥವಾ ಕೊಳವೆಗಳನ್ನು ಪುನಃ ಹಾಕುವ ಅಥವಾ ದುರಸ್ತಿ ಮಾಡುವ ಅವಶ್ಯಕತೆಯ ಸಂದರ್ಭದಲ್ಲಿ ನೀರಿನ ಸರಬರಾಜನ್ನು ನಿಲ್ಲಿಸಿದ್ದಕ್ಕಾಗಿ ಅಥವಾ ನೀರಿನ ಸರಬರಾಜನ್ನು ಮಾಡದಿರುವುದಕ್ಕಾಗಿ ಯಾವುದೇ ದಂಡನೆ ಅಥವಾ ಹಾನಿ ಪರಿಹಾರಕ್ಕೆ ಗುರಿಯಾಗತಕ್ಕುದಲ್ಲ.

**56. ನಳಿಕೆಗಳು, ಲೈನುಗಳು ಇತ್ಯಾದಿಗಳನ್ನು ಉಪಯೋಗಿಸುವವನ ಹಕ್ಕುಗಳು :-** (1) ಮಂಡಲಿಯು, ಬೆಂಗಳೂರು ಮಹಾನಗರ ಪ್ರದೇಶದ ಸ್ಥಳೀಯ ಪರಿಮಿತಿಗಳೊಳಗೇ ಆಗಲಿ ಅಥವಾ ಅದರ ಹೊರಗಡೆಯೇ ಆಗಲಿ ಇರುವ ಯಾವುದೇ ಸ್ಥಿರ ಸ್ವತ್ತಿನ ಮೇಲೆ, ಕೆಳಗೆ, ಅದರ ಗುಂಟ ಅಥವಾ ಅದಕ್ಕೆ ಅಡ್ಡವಾಗಿ, ನಳಿಕೆಗಳು, ಪ್ರಧಾನ ಕೊಳವೆಯ ಲೈನುಗಳು ಅಥವಾ ಕೊಳವೆಗಳನ್ನು ಹಾಕಬಹುದು ಮತ್ತು ಇಟ್ಟುಕೊಂಡುಬರಬಹುದು, ಮತ್ತು ಯಾವುದೇ ನಳಿಕೆಗಳು ಅಥವಾ ಪ್ರಧಾನ ಕೊಳವೆಯ ಲೈನುಗಳು ಅಥವಾ ಕೊಳವೆಗಳನ್ನು ಪರೀಕ್ಷಿಸುವ, ದುರಸ್ತಿಮಾಡುವ, ಬದಲಾಯಿಸುವ ಅಥವಾ ತೆಗೆದುಹಾಕುವ ಉದ್ದೇಶಕ್ಕಾಗಿ ಯಾವುದೇ ಕಾಲದಲ್ಲಿ ಆ ನಳಿಕೆಗಳು ಅಥವಾ ಪ್ರಧಾನ ಕೊಳವೆಗಳ ಲೈನುಗಳು ಅಥವಾ ಕೊಳವೆಗಳನ್ನು ಯಾವ ಸ್ವತ್ತಿನ ಮೇಲೆ, ಕೆಳಗೆ, ಅದರ ಗುಂಟ ಅಥವಾ ಅದಕ್ಕೆ ಅಡ್ಡವಾಗಿ ಹಾಕಲಾಗಿದೆಯೋ ಆ ಯಾವುದೇ ಸ್ವತ್ತಿನ ಮೇಲೆ ಪ್ರವೇಶಿಸಬಹುದು:

ಪರಂತು, ಮಂಡಲಿಯು, ಯಾವ ಸ್ವತ್ತಿನ ಮೇಲೆ, ಕೆಳಗೆ, ಅದರ ಗುಂಟ ಅಥವಾ ಅದಕ್ಕೆ ಅಡ್ಡವಾಗಿ ಯಾವುದೇ ನಳಿಕೆ ಅಥವಾ ಪ್ರಧಾನ ಕೊಳವೆಯ ಲೈನು ಅಥವಾ ಕೊಳವೆಗಳನ್ನು ಹಾಕಲಾಗಿದೆಯೋ ಆ ಯಾವುದೇ ಸ್ವತ್ತಿನಲ್ಲಿನ ಉಪಯೋಗದ ಹಕ್ಕನ್ನು ಹೊರತುಪಡಿಸಿ ಯಾವುದೇ ಇತರ ಹಕ್ಕನ್ನು ಆರ್ಜಿಸತಕ್ಕುದಲ್ಲ.

(2) ಈ ಪ್ರಕರಣದ ಮೂಲಕ ಅದಕ್ಕೆ ಪ್ರಧಾನ ಮಾಡಿದ ಅಧಿಕಾರಗಳನ್ನು ಚಲಾಯಿಸುವಲ್ಲಿ ಮಂಡಳಿಯು ಸಾಧ್ಯವಾದಷ್ಟು ಕಡಿಮೆ ಹಾನಿ ಮತ್ತು ಅನಾನುಕೂಲತೆಯನ್ನು ಮಾಡತಕ್ಕುದು ಮತ್ತು ಅದರಿಂದ ಉಂಟಾದ ಯಾವುದೇ ಹಾನಿ ಅಥವಾ ಅನಾನುಕೂಲತೆಗಾಗಿ ಪೂರ್ಣ ನಷ್ಟ ಪರಿಹಾರವನ್ನು ಕೊಡತಕ್ಕುದು.

**57. ಇತರ ವ್ಯಕ್ತಿಗಳಿಗೆ ಸೇರಿದ ಭೂಮಿಯ ಮೂಲಕ ಕೊಳವೆಗಳನ್ನು ಹಾಕಲು ಆವರಣದ ಒಡೆಯನ ಅಧಿಕಾರ:-** (1) ಮಂಡಳಿಗೆ ಮತ್ತೊಬ್ಬ ವ್ಯಕ್ತಿಗೆ ಸೇರಿದ ಸ್ಥಿರ ಸ್ವತ್ತಿನ ಮೇಲೆ, ಕೆಳಗೆ, ಅದರ ಗುಂಟ ಅಥವಾ ಅದಕ್ಕೆ ಅಡ್ಡವಾಗಿ ಯಾವುದೇ ಕೊಳವೆಯನ್ನು ಹಾಕುವುದು ಅಥವಾ ಒಯ್ಯುವುದರ ಮೂಲಕ ಯಾವುದೇ ಆವರಣಕ್ಕೆ ನೀರು ಸರಬರಾಜು ಮಾಡುವುದು ಏಕೈಕ ಅಥವಾ ಅತ್ಯಂತ ಅನುಕೂಲಕರ ಸಾಧನವೆಂದು ಕಂಡುಬಂದರೆ, ಅದು ಬರಹದಲ್ಲಿನ ಆದೇಶದ ಮೂಲಕ, ಅಂಥ ಸ್ಥಿರ ಸ್ವತ್ತಿನ ಮೇಲೆ, ಕೆಳಗೆ, ಅದರ ಗುಂಟ ಅಥವಾ ಅದಕ್ಕೆ ಅಡ್ಡವಾಗಿ ಅಂಥ ಕೊಳವೆಯನ್ನು ಹಾಕಲು ಅಥವಾ ಒಯ್ಯಲು ಆವರಣದ ಒಡೆಯನಿಗೆ ಅಧಿಕೃತಗೊಳಿಸಬಹುದು:

ಪರಂತು, ಅಂಥ ಯಾವುದೇ ಸ್ಥಿರಸ್ವತ್ತಿನ ಒಡೆಯನಿಗೆ ಆದೇಶವನ್ನು ಮಾಡುವುದಕ್ಕೆ ಮುಂಚೆ ಮಂಡಳಿಯು ಆ ಆದೇಶವನ್ನು ಏಕೆ ಮಾಡಬಾರದು ಎಂಬುದರ ಬಗ್ಗೆ ಈ ಬಗ್ಗೆ ರಚಿಸಿದ ವಿನಿಯಮಗಳ ಮೂಲಕ ನಿಯಮಿಸಬಹುದಾದಂಥ ಕಾಲದೊಳಗೆ ಕಾರಣ ತೋರಿಸಲು ಯುಕ್ತ ಅವಕಾಶವನ್ನು ಕೊಡತಕ್ಕುದು:

ಮತ್ತೂ ಪರಂತು, ಯಾವ ಸ್ವತ್ತಿನ ಮೇಲೆ, ಕೆಳಗೆ, ಅದರ ಗುಂಟ ಅಥವಾ ಅದಕ್ಕೆ ಅಡ್ಡವಾಗಿ ಯಾವುದೇ ಅಂಥ ಕೊಳವೆಯನ್ನು ಹಾಕಲಾಗಿದೆಯೋ ಅಥವಾ ಒಯ್ಯಲಾಗಿದೆಯೋ ಆ ಸ್ವತ್ತಿನಲ್ಲಿನ ಉಪಯೋಗದ ಹಕ್ಕನ್ನು ಹೊರತುಪಡಿಸಿ ಯಾವುದೇ ಇತರ ಹಕ್ಕನ್ನು ಆರ್ಜಿಸತಕ್ಕುದಲ್ಲ.

(2) (1)ನೇ ಉಪಪ್ರಕರಣದ ಮೇರೆಗೆ ಆದೇಶವನ್ನು ಮಾಡಿದ ಮೇಲೆ ಆ ಆವರಣದ ಒಡೆಯನು, ಹಾಗೆ ಮಾಡುವ ಅವನ ಉದ್ದೇಶದ ಬಗ್ಗೆ ಯುಕ್ತ ನೋಟೀಸನ್ನು ಕೊಟ್ಟ ತರುವಾಯ, ಅಂಥ ಸ್ವತ್ತಿನ ಮೇಲೆ, ಕೆಳಗೆ, ಅದರ ಗುಂಟ ಅಥವಾ ಅದಕ್ಕೆ ಅಡ್ಡವಾಗಿ ಕೊಳವೆಯನ್ನು ಹಾಕುವ ಉದ್ದೇಶಕ್ಕಾಗಿ ಅಥವಾ ಅದನ್ನು ದುರಸ್ತಿ ಮಾಡುವ ಉದ್ದೇಶಕ್ಕಾಗಿ ಆ ಸ್ಥಿರ ಸ್ವತ್ತಿನ ಮೇಲೆ ಸಹಾಯಕರು ಮತ್ತು ಕೆಲಸಗಾರರೊಂದಿಗೆ ಸೂರ್ಯೋದಯ ಮತ್ತು ಸೂರ್ಯಾಸ್ತದ ನಡುವಣ ಯಾವುದೇ ಕಾಲದಲ್ಲಿ ಪ್ರವೇಶಿಸಬಹುದು.

(3) ಈ ಪ್ರಕರಣದ ಮೇರೆಗೆ ಕೊಳವೆಯನ್ನು ಹಾಕುವಲ್ಲಿ ಅಥವಾ ಒಯ್ಯುವಲ್ಲಿ ಸ್ಥಿರ ಸ್ವತ್ತಿಗೆ ಸಾಧ್ಯವಾದಷ್ಟು ಕಡಿಮೆ ಹಾನಿಯನ್ನುಂಟು ಮಾಡತಕ್ಕುದು ಮತ್ತು ಆವರಣದ ಒಡೆಯನು,-

(ಎ) ಕಾರ್ಯ ಸಾಧ್ಯವಾದಷ್ಟು ಕಡಿಮೆ ವಿಳಂಬದಲ್ಲಿ ಆ ಕೊಳವೆಯನ್ನು ಹಾಕುವಂತೆ ಅಥವಾ ಒಯ್ಯುವಂತೆ ಮಾಡತಕ್ಕುದು;

(ಬಿ) ಅಂಥ ಕೊಳವೆಯನ್ನು ಹಾಕುವ ಅಥವಾ ಒಯ್ಯುವ ಉದ್ದೇಶಕ್ಕಾಗಿ ತೆರೆದ, ಅಗೆದ ಅಥವಾ ತೆಗೆದುಹಾಕಿದ ಯಾವುದೇ ಭೂಮಿಯನ್ನು ಅವನ ಸ್ವಂತ ಖರ್ಚಿನಲ್ಲಿ ಮತ್ತು ಕಾರ್ಯಸಾಧ್ಯವಾದಷ್ಟು ಕಡಿಮೆ ವಿಳಂಬದಲ್ಲಿ ಮುಚ್ಚತಕ್ಕುದು, ಪುನಃ ಸ್ಥಾಪಿಸತಕ್ಕದು ಮತ್ತು ತುಂಬಿಕೊಡತಕ್ಕುದು; ಮತ್ತು

(ಸಿ) ಅಂಥ ಕೊಳವೆಯನ್ನು ಹಾಕುವ ಅಥವಾ ಒಯ್ಯುವ ಕಾರಣದಿಂದ ಅಂಥ ಸ್ಥಿರ ಸ್ವತ್ತಿನ ಒಡೆಯನಿಗೆ ಮತ್ತು ಇತರ ಯಾವನೇ ವ್ಯಕ್ತಿಗೆ ಉಂಟಾಗಿರುವ ಹಾನಿಗಾಗಿ ನಷ್ಟಪರಿಹಾರವನ್ನು ಸಂದಾಯ ಮಾಡತಕ್ಕುದು.

(4) ಅಂಥ ಸ್ಥಿರ ಸ್ವತ್ತಿನ ಮೇಲೆ ಕಟ್ಟಡವನ್ನು ಕಟ್ಟದೇ ಇದ್ದಾಗ ಈ ಪ್ರಕರಣದ ಮೇರೆಗೆ ಯಾವ ಸ್ವತ್ತಿನ ಮೇಲೆ, ಕೆಳಗೆ, ಅದರ ಗುಂಟ ಅಥವಾ ಅದಕ್ಕೆ ಅಡ್ಡವಾಗಿ ಕೊಳವೆಯನ್ನು ಹಾಕಲಾಗಿದೆಯೋ ಆ ಸ್ಥಿರ ಸ್ವತ್ತಿನ ಒಡೆಯನು ಅಂಥ ಸ್ಥಿರ ಸ್ವತ್ತಿನ ಮೇಲೆ ಯಾವುದೇ ಕಟ್ಟಡವನ್ನು ನಿರ್ಮಿಸಲು ಇಚ್ಛಿಸಿದರೆ, ಮಂಡಳಿಯು ಬರಹದಲ್ಲಿನ ನೋಟೀಸಿನ ಮೂಲಕ, ಆ ಆವರಣದ ಒಡೆಯನನ್ನು ಅವನು ಅನುಮೋದಿಸಬಹುದಾದಂಥ ರೀತಿಯಲ್ಲಿ ಆ ಕೊಳವೆಯನ್ನು ಮುಚ್ಚಲು, ತೆಗೆದುಹಾಕಲು ಅಥವಾ ಅದರ ಮಾರ್ಗವನ್ನು ಬದಲಾಯಿಸಲು ಮತ್ತು ಆ ಕೊಳವೆಯನ್ನು ಅದರ ಮೇಲೆ, ಕೆಳಗೆ, ಅದರ ಗುಂಟ ಅಥವಾ ಅದಕ್ಕೆ ಅಡ್ಡವಾಗಿ ಹಾಕಿರದಿದ್ದರೆ ಮತ್ತು ಒಯ್ದಿರದಿದ್ದರೆ ಹೇಗೋ ಹಾಗೆ ಆ ಸ್ಥಿರ ಸ್ವತ್ತನ್ನು ಮುಚ್ಚಲು, ಪುನಃ ಸ್ಥಾಪಿಸಲು ಮತ್ತು ತುಂಬಿಕೊಡಲು ಅಗತ್ಯಪಡಿಸತಕ್ಕುದು:

ಪರಂತು, ಯಾವುದೇ ಅಂಥ ಕಡ್ಡಾಯ ಕೋರಿಕೆಯನ್ನು ಉದ್ದೇಶಿತ ಕಟ್ಟಡ ಅಥವಾ ಅದರ ಸುರಕ್ಷಿತ ಅನುಭೋಗಕ್ಕಾಗಿ ಆ ಕೊಳವೆಯನ್ನು ಮುಚ್ಚುವುದು, ತೆಗೆದುಹಾಕುವುದು ಅಥವಾ ಅದರ ಮಾರ್ಗವನ್ನು ಬದಲಾಯಿಸುವುದು ಅವಶ್ಯ ಅಥವಾ ವಿಹಿತವೆಂದು ಮಂಡಳಿಯು ಅಭಿಪ್ರಾಯಪಟ್ಟ ಹೊರತು, ಮಾಡತಕ್ಕುದಲ್ಲ.

**58. ಹೊಣೆಗಾರನಾದ ವ್ಯಕ್ತಿಗೆ ನೋಟೀಸನ್ನು ಕೊಟ್ಟ ತರುವಾಯ ಕಾಮಗಾರಿಯನ್ನು ಕಾರ್ಯಗತಗೊಳಿಸಲು ಅಧಿಕಾರ:-** (1) ಈ ಅಧ್ಯಾಯದ ಉಪಬಂಧಗಳ ಮೇರೆಗೆ, ಯಾವುದೇ ಕಾಮಗಾರಿಯನ್ನು ಕಾರ್ಯಗತಗೊಳಿಸಲು ಯಾವನೇ ವ್ಯಕ್ತಿಯನ್ನು ಅಗತ್ಯಪಡಿಸಬಹುದಾದಾಗ ಅಥವಾ ಹೊಣೆಗಾರನಾಗಿರುವಾಗ, ಮಂಡಳಿಯು ಈ ಅಧಿನಿಯಮದ ಉಪಬಂಧಗಳ ಮತ್ತು ಈ ಬಗ್ಗೆ ರಚಿಸಿದ ಯಾವುದೇ ನಿಯಮ ಅಥವಾ ವಿನಿಯಮದ ಉಪಬಂಧಗಳಿಗೆ ಅನುಸಾರವಾಗಿ, ಅದು ಈ ಉದ್ದೇಶಕ್ಕಾಗಿ ನಿರ್ದಿಷ್ಟಪಡಿಸಬಹುದಾದಂಥ ಕಾಲದೊಳಗೆ ಅದನ್ನು ಕಾರ್ಯಗತಗೊಳಿಸಲು ಅಂಥ ವ್ಯಕ್ತಿಗೆ ಅವಕಾಶವನ್ನು ಕೊಟ್ಟ ತರುವಾಯ ಅಂಥ ಕಾಮಗಾರಿಯನ್ನು ಕಾರ್ಯಗತಗೊಳಿಸುವಂತೆ ಮಾಡಬಹುದು.

(2) ಅಂಥ ಯಾವುದೇ ಕಾಮಗಾರಿಯನ್ನು ಕಾರ್ಯಗತಗೊಳಿಸುವಲ್ಲಿ ಮಂಡಳಿಯು ವಹಿಸಿದ ಅಥವಾ ವಹಿಸುವ ಸಂಭವವಿರುವ ವೆಚ್ಚಗಳನ್ನು ಸದರಿ ವ್ಯಕ್ತಿಯು ಸಂದಾಯಮಾಡತಕ್ಕುದು ಮತ್ತು ಅಂಥ ಕಾಮಗಾರಿಯ ನಿರ್ವಹಣೆಗೆ ಸಂಬಂಧಪಟ್ಟಂತೆ ಮಂಡಳಿಯು ವಹಿಸಿದ ವೆಚ್ಚಗಳನ್ನು, ಅಂಥ ಕಾಮಗಾರಿಯಿಂದ ಒದಗಿಸಲಾಗಿರುವಂಥ ಸೌಕರ್ಯಗಳು ಮತ್ತು ಅನುಕೂಲತೆಗಳನ್ನು ಅನುಭೋಗಿಸುತ್ತಿರುವ ವ್ಯಕ್ತಿ ಅಥವಾ ವ್ಯಕ್ತಿಗಳು ಸಂದಾಯಮಾಡತಕ್ಕುದು.

(3) (2)ನೇ ಉಪಪ್ರಕರಣದಲ್ಲಿ ಉಲ್ಲೇಖಿಸಲಾದ ವೆಚ್ಚಗಳನ್ನು ಅದಕ್ಕೆ ಹೊಣೆಯಾದ ವ್ಯಕ್ತಿ ಅಥವಾ ವ್ಯಕ್ತಿಗಳಿಂದ ಈ ಅಧಿನಿಯಮದ ಮೇರೆಗೆ ಸಂದಾಯ ಮಾಡಬೇಕಾದ ಚಾರ್ಜುಗಳ ಬಾಕಿಯಂತೆ ವಸೂಲು ಮಾಡತಕ್ಕುದು.

**59. ಲೈಸೆನ್ಸು ಪಡೆದ ಕೊಳಾಯಿಗಾರನು ಮಾಡಬೇಕಾದ ಕಾಮಗಾರಿ:-** (1) ಲೈಸೆನ್ಸನ್ನು ಪಡೆದ ಕೊಳಾಯಿಗಾರನನ್ನು ಹೊರತುಪಡಿಸಿ ಯಾವನೇ ಇತರ ವ್ಯಕ್ತಿಯು ಈ ಅಧ್ಯಾಯದಲ್ಲಿ ವಿವರಿಸಿರುವ ಯಾವುದೇ ಕಾಮಗಾರಿಯನ್ನು ನಿರ್ವಹಿಸತಕ್ಕುದಲ್ಲ ಮತ್ತು ಯಾವನೇ ವ್ಯಕ್ತಿಯು ಲೈಸೆನ್ಸು ಪಡೆದ ಕೊಳಾಯಿಗಾರನನ್ನು ಹೊರತುಪಡಿಸಿ ಅಂಥ ಯಾವುದೇ ಕಾಮಗಾರಿಯನ್ನು ನಿರ್ವಹಿಸಲು ಅನುಮತಿಸತಕ್ಕುದಲ್ಲ:

ಪರಂತು, ನೀರು ಸರಬರಾಜು ಇಂಜಿನಿಯರನ ಅಭಿಪ್ರಾಯದಲ್ಲಿ ಆ ಕಾಮಗಾರಿಯು ಅಲ್ಪ ಸ್ವರೂಪವಾಗಿದ್ದರೆ, ಅವನು, ಲೈಸೆನ್ಸು ಪಡೆದ ಕೊಳಾಯಿಗಾರನನ್ನು ಹೊರತುಪಡಿಸಿ ಯಾವನೇ ಇತರ ವ್ಯಕ್ತಿಯು ಅಂಥ ಕಾಮಗಾರಿಯನ್ನು ನಿರ್ವಹಿಸುವುದಕ್ಕಾಗಿ ಬರಹದಲ್ಲಿನ ಅನುಮತಿಯನ್ನು ಕೊಡಬಹುದು.

(2) ಯಾವುದೇ ಕಾಮಗಾರಿಯನ್ನು ನಿರ್ವಹಿಸಲು ಲೈಸೆನ್ಸು ಪಡೆದ ಕೊಳಾಯಿಗಾರನನ್ನು ನಿಯೋಜಿಸಿಕೊಳ್ಳುವ ಪ್ರತಿಯೊಬ್ಬ ವ್ಯಕ್ತಿಯು, ಹಾಗೆ ಅಗತ್ಯಪಡಿಸಿದಾಗ, ನೀರು ಸರಬರಾಜು ಇಂಜಿನಿಯರನಿಗೆ ಅಂಥ ಕೊಳಾಯಿಗಾರನ ಹೆಸರನ್ನು ಒದಗಿಸತಕ್ಕುದು.

(3) (1)ನೇ ಉಪಪ್ರಕರಣದ ಉಪಬಂಧಗಳಿಗೆ ಅನುಸಾರವಾಗಿ ಅಲ್ಲದೆ ಯಾವುದೇ ಕೆಲಸವನ್ನು ನಿರ್ವಹಿಸಿದಾಗ, ಅಂಥ ಕಾಮಗಾರಿಯನ್ನು ಯಾವ ವ್ಯಕ್ತಿಯಿಂದಾಗಿ ನಿರ್ವಹಿಸಲಾಗಿದೆಯೋ ಆ ವ್ಯಕ್ತಿಯನ್ನು ಈ ಅಧಿನಿಯಮದ ಮೇರೆಗೆ ಪ್ರಾಸಿಕ್ಯೂಟ್ ಮಾಡಲು ಮಂಡಳಿಯ ಹಕ್ಕಿಗೆ ಬಾಧಕವಾಗದಂತೆ ಮಂಡಳಿಯ ವಿವೇಚನಾನುಸಾರ ಅಂಥ ಕಾಮಗಾರಿಯನ್ನು ನೆಲಸಮ ಮಾಡಲು ಹೊಣೆಗಾರನಾಗಿರತಕ್ಕುದು.

(4) ಮಂಡಳಿಯು, ಲೈಸೆನ್ಸು ಪಡೆದ ಕೊಳಾಯಿಗಾರನ ಮಾರ್ಗದರ್ಶನಕ್ಕಾಗಿ ವಿನಿಯಮಗಳನ್ನು ರಚಿಸಬಹುದು ಮತ್ತು ಅಂಥ ಎಲ್ಲಾ ವಿನಿಯಮಗಳ ಪ್ರತಿಯನ್ನು ಮಂಡಲಿಯು ಕೊಳಾಯಿಗಾರನಿಗೆ ಕೊಟ್ಟ ಪ್ರತಿಯೊಂದು ಲೈಸೆನ್ಸಿಗೆ ಲಗತ್ತಿಸತಕ್ಕುದು.

(5) ಮಂಡಲಿಯು, ಕಾಲಕಾಲಕ್ಕೆ, ಈ ಅಧ್ಯಾಯದ ಯಾವುವೇ ಉದ್ದೇಶಗಳ ಮೇರೆಗೆ ಅಥವಾ ಅವುಗಳಿಗಾಗಿ ಅವರು ಮಾಡಿದ ಯಾವುದೇ ಕಾಮಗಾರಿಗಾಗಿ, ಲೈಸೆನ್ಸು ಪಡೆದ ಕೊಳಾಯಿಗಾರರಿಗೆ ಸಂದಾಯಮಾಡಬೇಕಾದ ಚಾರ್ಜುಗಳನ್ನು ನಿಯಮಿಸಬಹುದು.

(6) ಲೈಸೆನ್ಸು ಪಡೆದ ಯಾವನೇ ಕೊಳಾಯಿಗಾರನು, (5)ನೇ ಉಪಪ್ರಕರಣದಲ್ಲಿ ಉಲ್ಲೇಖಿಸಿದ ಯಾವುದೇ ಕಾಮಗಾರಿಗಾಗಿ, ಆ ಉಪಪ್ರಕರಣದ ಮೇರೆಗೆ ಅದಕ್ಕಾಗಿ ನಿಯಮಿಸಲಾದುದಕ್ಕಿಂತ ಹೆಚ್ಚಿನ ಚಾರ್ಜುಗಳನ್ನು ತಗಾದೆ ಮಾಡತಕ್ಕುದಲ್ಲ ಅಥವಾ ಸ್ವೀಕರಿಸತಕ್ಕುದಲ್ಲ.

(7) ಮಂಡಲಿಯು,-

(ಎ) ಲೈಸೆನ್ಸು ಪಡೆದ ಎಲ್ಲಾ ಕೊಳಾಯಿಗಾರರ ಮೇಲೆ ಸಾಕಷ್ಟು ನಿಯಂತ್ರಣವನ್ನು ಚಲಾಯಿಸುವುದಕ್ಕಾಗಿ;

(ಬಿ) ಅವರು ಕಾರ್ಯಗತಗೊಳಿಸಿದ ಎಲ್ಲಾ ಕಾಮಗಾರಿಗಳ ಪರಿಶೀಲನೆಗಾಗಿ; ಮತ್ತು

(ಸಿ) ಲೈಸೆನ್ಸು ಪಡೆದ ಕೊಳಾಯಿಗಾರರು ಮಾಡಿದ ಕೆಲಸದ ಗುಣಮಟ್ಟ, ಉಪಯೋಗಿಸಿದ ಸಾಮಗ್ರಿ, ಕಾಮಗಾರಿಯನ್ನು ನಿರ್ವಹಿಸುವಲ್ಲಿನ ವಿಳಂಬ ಮತ್ತು ಮಾಡಿದ ಚಾರ್ಜುಗಳು ಇವುಗಳ ಬಗ್ಗೆ ಆವರಣದ ಒಡೆಯರು ಅಥವಾ ಅಧಿಭೋಗದಾರರು ಮಾಡಿಕೊಂಡಿರುವ ದೂರುಗಳ ಸುನಾವಣೆ ಮತ್ತು ವಿಲೆಗಾಗಿ

- ಉಪಬಂಧಿಸುವ ವಿನಿಯಮಗಳನ್ನು ರಚಿಸತಕ್ಕುದು.

(8) ಯಾವನೇ ಲೈಸೆನ್ಸು ಪಡೆದ ಕೊಳಾಯಿಗಾರನು, ಈ ಪ್ರಕರಣದ ಮೇರೆಗೆ ರಚಿಸಿದ ಯಾವುವೇ ವಿನಿಯಮಗಳನ್ನು ಉಲ್ಲಂಘಿಸತಕ್ಕುದಲ್ಲ ಅಥವಾ ಈ ಅಧಿನಿಯಮದ ಮೇರೆಗೆ ಯಾವುದೇ ಕಾಮಗಾರಿಯನ್ನು ಅಜಾಗರೂಕತೆ ಅಥವಾ ನಿರ್ಲಕ್ಷ್ಯತೆಯಿಂದ ನಿರ್ವಹಿಸತಕ್ಕುದಲ್ಲ ಅಥವಾ ಚೆನ್ನಾಗಿಲ್ಲದ ಸಾಮಗ್ರಿಗಳು, ಸಾಧನಗಳು ಅಥವಾ ಜೋಡಣೆಗಳನ್ನು ಉಪಯೋಗಿಸತಕ್ಕುದಲ್ಲ.

(9) ಯಾವನೇ ಲೈಸೆನ್ಸು ಪಡೆದ ಕೊಳಾಯಿಗಾರನು, (8)ನೇ ಉಪಪ್ರಕರಣವನ್ನು ಉಲ್ಲಂಘಿಸಿದರೆ, ಈ ಅಧಿನಿಯಮದ ಮೇರೆಗೆ ಅವನನ್ನು ಪ್ರಾಸಿಕ್ಯೂಟ್ ಮಾಡಿರಲಿ ಅಥವಾ ಮಾಡಿಲ್ಲದಿರಲಿ, ಅವನ ಲೈಸೆನ್ಸನ್ನು ಅಮಾನತ್ತಿನಲ್ಲಿಡಬಹುದು ಅಥವಾ ರದ್ದುಪಡಿಸಬಹುದು.

**60. ಕೆಲವು ಕಾರ್ಯಗಳ ಬಗ್ಗೆ ನಿಷೇಧ:-** (1) ಯಾವನೇ ವ್ಯಕ್ತಿಯು,-

(ಎ) ಯಾವುದೇ ಕಾಮಗಾರಿಯಲ್ಲಿ ಲೈನುಗಳನ್ನು ಹಾಕುವಲ್ಲಿ ಮಂಡಲಿಯ ಅಧಿಕಾರದ ಮೇರೆಗೆ ಕಾರ್ಯನಿರ್ವಹಿಸುತ್ತಿರುವ ಯಾವನೇ ವ್ಯಕ್ತಿಯನ್ನು ಉದ್ದೇಶಪೂರ್ವಕವಾಗಿ ಅಡ್ಡಿಪಡಿಸತಕ್ಕುದಲ್ಲ ಅಥವಾ ಅಂಥ ಕಾಮಗಾರಿಯ ಲೈನುಗಳನ್ನು ಹಾಕುವ ಉದ್ದೇಶಕ್ಕಾಗಿ ನೆಲದಲ್ಲಿ ಜೋಡಿಸಿರುವ ಯಾವುದೇ ಕಂಬ, ಸ್ತಂಬ ಅಥವಾ ಗೂಟವನ್ನು ಕೀಳತಕ್ಕುದಲ್ಲ ಅಥವಾ ತೆಗೆದುಹಾಕತಕ್ಕುದಲ್ಲ ಅಥವಾ ಅದೇ ಉದ್ದೇಶಕ್ಕಾಗಿ ಮಾಡಿದ ಯಾವುದೇ ಕಾಮಗಾರಿಗಳನ್ನು ವಿರೂಪಗೊಳಿಸತಕ್ಕುದಲ್ಲ ಅಥವಾ ನಾಶಪಡಿಸತಕ್ಕುದಲ್ಲ; ಅಥವಾ

(ಬಿ) ಮಂಡಲಿಗೆ ಸೇರಿದ ಯಾವುದೇ ಬೀಗ, ಬಿರುಡೆ, ಕವಾಟ, ಕೊಳವೆ, ಮೀಟರು ಅಥವಾ ಇತರ ಕಾಮಗಾರಿ ಅಥವಾ ಸಲಕರಣೆಗಳನ್ನು ಉದ್ದೇಶಪೂರ್ವಕವಾಗಿ ಅಥವಾ ನಿರ್ಲಕ್ಷ್ಯತೆಯಿಂದ ಒಡೆಯತಕ್ಕುದಲ್ಲ, ಹಾನಿಪಡಿಸತಕ್ಕುದಲ್ಲ, ತಿರುಗಿಸತಕ್ಕುದಲ್ಲ, ತೆಗೆಯತಕ್ಕುದಲ್ಲ, ಮುಚ್ಚತಕ್ಕುದಲ್ಲ, ನಿಲ್ಲಿಸತಕ್ಕುದಲ್ಲ ಅಥವಾ ಅದರಲ್ಲಿ ಅನ್ಯಥಾ ಹಸ್ತಕ್ಷೇಪ ಮಾಡತಕ್ಕುದಲ್ಲ; ಅಥವಾ

(ಸಿ) ಮಂಡಲಿಗೆ ಸೇರಿದ ಯಾವುದೇ ನೀರು ಸರಬರಾಜು ಗೃಹದಿಂದ ಅಥವಾ ಯಾವ ಜಲ ಮಾರ್ಗದಿಂದ ಅಂಥ ನೀರನ್ನು ಸರಬರಾಜು ಮಾಡಲಾಗುತ್ತಿದೆಯೋ ಆ ಯಾವುದೇ ಜಲಮಾರ್ಗದಿಂದ ನೀರು ಹರಿಯುವುದನ್ನು, ಅದನ್ನು ಹರಿಸಿ ತೊಳೆಯುವುದನ್ನು ಕಾನೂನು ಬಾಹಿರವಾಗಿ ಅಡ್ಡಿಪಡಿಸತಕ್ಕುದಲ್ಲ ಅಥವಾ ಅದನ್ನು ಸೇದತಕ್ಕುದಲ್ಲ ಅಥವಾ ಮಾರ್ಗಪಲ್ಲಟಗೊಳಿಸತಕ್ಕುದಲ್ಲ ಅಥವಾ ತೆಗೆದುಕೊಳ್ಳತಕ್ಕುದಲ್ಲ; ಅಥವಾ

(ಡಿ) ಈ ಅಧ್ಯಾಯದ ಮೇರೆಗೆ ಅವನ ಕರ್ತವ್ಯಗಳನ್ನು ನಿರ್ವಹಿಸುವಲ್ಲಿ ಮಂಡಲಿಯ ಯಾವನೇ ಅಧಿಕಾರಿ ಅಥವಾ ಇತರ ನಿಯೋಜಿತನಿಗೆ ಅಡ್ಡಿಪಡಿಸತಕ್ಕುದಲ್ಲ ಅಥವಾ ನೀರು ಸರಬರಾಜು ಗೃಹಕ್ಕೆ ಸಂಬಂಧಪಟ್ಟಂತೆ ಅದರ ಮೇರೆಗೆ ಯಾವುದೇ ಪ್ರವೇಶ, ಪರಿಶೀಲನೆ, ಪರೀಕ್ಷೆ

ಅಥವಾ ವಿಚಾರಣೆಯನ್ನು ಮಾಡುವುದಕ್ಕಾಗಿ ಅವಶ್ಯವಾದ ಸಾಧನವನ್ನು ಅವನಿಗೆ ಒದಗಿಸಲು ನಿರಾಕರಿಸತಕ್ಕುದಲ್ಲ ಅಥವಾ ಉದ್ದೇಶಪೂರ್ವಕವಾಗಿ ಉಪೇಕ್ಷಿಸತಕ್ಕುದಲ್ಲ; ಅಥವಾ

(ಇ) ಯಾವುದೇ ನೀರು ಸರಬರಾಜು ಗೃಹದಲ್ಲಿ ಅದರ ಬಳಿ ಅಥವಾ ಅದರ ಮೇಲೆ ಸ್ನಾನಮಾಡತಕ್ಕುದಲ್ಲ ಅಥವಾ ಯಾವುದೇ ಪ್ರಾಣಿಯನ್ನು ಅದರಲ್ಲಿ ತೊಳೆಯತಕ್ಕುದಲ್ಲ, ಅಥವಾ ಎಸೆಯತಕ್ಕುದಲ್ಲ ಅಥವಾ ಅದರೊಳಗೆ ಪ್ರವೇಶಿಸುವಂತೆ ಮಾಡತಕ್ಕುದಲ್ಲ, ಅಥವಾ ಯಾವುದೇ ನೀರು ಸರಬರಾಜು ಗೃಹದೊಳಕ್ಕೆ ಯಾವುದೇ ಕಸ, ಕೊಳೆ ಅಥವಾ ಹೊಲಸನ್ನು ಎಸೆಯತಕ್ಕುದಲ್ಲ ಅಥವಾ ಅದರಲ್ಲಿ ಯಾವುದೇ ಬಟ್ಟೆ, ಉಣ್ಣೆ ಅಥವಾ ಯಾವುದೇ ಪ್ರಾಣಿಯ ತೊಗಲು ಅಥವಾ ಚರ್ಮವನ್ನು ತೊಳೆಯತಕ್ಕುದಲ್ಲ ಅಥವಾ ಸ್ವಚ್ಛಗೊಳಿಸತಕ್ಕುದಲ್ಲ ಅಥವಾ ಯಾವುದೇ ನೀರು ಸರಬರಾಜು ಗೃಹದೊಳಕ್ಕೆ ಯಾವುದೇ ಸಿಂಕು ಅಥವಾ ಚರಂಡಿ ಅಥವಾ ಯಾವುದೇ ಉಗಿ ಎಂಜಿನ್ ಅಥವಾ ಬಾಯ್ಲರಿನ ನೀರನ್ನು ಅಥವಾ ಯಾವುದೇ ಕಲುಷಿತವಾದ ನೀರನ್ನು ತಿರುಗಿಸತಕ್ಕುದಲ್ಲ ಅಥವಾ ಅದರೊಳಕ್ಕೆ ಬರುವಂತೆ ಮಾಡತಕ್ಕುದಲ್ಲ ಅಥವಾ ಯಾವುದರ ಮೂಲಕ ಯಾವುದೇ ನೀರು ಸರಬರಾಜು ಗೃಹದಲ್ಲಿನ ನೀರು ಮಲಿನವಾಗುವ ಅಥವಾ ಮಲಿನವಾಗುವ ಸಂಭವವಿರುವ ಯಾವುದೇ ಇತರ ಕಾರ್ಯವನ್ನು ಮಾಡತಕ್ಕುದಲ್ಲ.

(2) (1)ನೇ ಉಪಪ್ರಕರಣದ (ಬಿ) ಖಂಡದಲ್ಲಿರುವುದು ಯಾವುದೂ, ಬಳಕೆದಾರನು ಅವನ ಆವರಣಕ್ಕೆ ನೀರು ಸರಬರಾಜು ಮಾಡುವ ಸರ್ವೀಸ್ ಪೈಪಿನ ಮೇಲೆ ಜೋಡಿಸಿರುವ ನಿಲು ಬಿರುಡೆಯನ್ನು ಮುಚ್ಚುವುದಕ್ಕೆ, ಅದರ ಮೂಲಕ ಯಾರಿಗೆ ಸರಬರಾಜು ಬಾಧಕವಾಗಬಹುದೋ ಆ ಯಾವನೇ ಇತರ ಬಳಕೆದಾರನ ಸಮ್ಮತಿಯನ್ನು ಅವನು ಪಡೆದುಕೊಂಡಿರುವಷ್ಟರವರೆಗೆ ಮುಚ್ಚುವುದಕ್ಕೆ ಅನ್ವಯವಾಗತಕ್ಕುದಲ್ಲ.

[1][**61. ನೀರು ಸರಬರಾಜಿಗೆ ಸಂಬಂಧಿಸಿದಂತೆ ವಿನಿಯಮಗಳು:-** ಮಂಡಲಿಯು ರಾಜ್ಯ ಸರ್ಕಾರದ ಪೂರ್ವಾನುಮೋದನೆಯೊಂದಿಗೆ ಈ ಅಧ್ಯಾಯದ ಉದ್ದೇಶಗಳನ್ನು ಈಡೇರಿಸಲು ವಿನಿಯಮಗಳನ್ನು ರಚಿಸಬಹುದು.

(2) ವಿಶೇಷವಾಗಿ ಮತ್ತು ಹಿಂದೆ ಹೇಳಿದ ಉಪಬಂಧದ ಸಾಮಾನ್ಯಾನ್ವಯಕ್ಕೆ ಬಾಧಕವಾಗದಂತೆ ಅಂಥ ವಿನಿಯಮಗಳು,-

(ಎ) (i) ಗೃಹ ಉಪಯೋಗಕ್ಕಾಗಿಯೇ ಆಗಲಿ ಅಥವಾ ಅಲ್ಲದಿರಲಿ ಅಥವಾ ಉಚಿತ ಉಪಯೋಗಕ್ಕಾಗಿ ನೀರಿನ ಸರಬರಾಜನ್ನು ನಿಲ್ಲಿಸಲು; ಮತ್ತು

(ii) ವ್ಯವಹಾರದ ಉದ್ದೇಶಕ್ಕಾಗಿ ನೀರಿನ ಮಾರಾಟ ಮತ್ತು ಉಪಯೋಗವನ್ನು ನಿಷೇಧಿಸಲು

- ಮಂಡಲಿಯ ಅಧಿಕಾರ;

(ಬಿ) ಖಾಸಗಿ ಸಂಪರ್ಕಗಳ ಪ್ರಭಾರವನ್ನು ತೆಗೆದುಕೊಳ್ಳಲು ಮಂಡಲಿಯ ಅಧಿಕಾರ;

(ಸಿ) ನೀರಿನ ಮೋಸದ ಅಥವಾ ಅನಧಿಕೃತ ಉಪಯೋಗದ ನಿಷೇಧ ಮತ್ತು ನೀರಿನ ಮೀಟರುಗಳನ್ನು ಕೆಡಿಸುವುದರ ಬಗ್ಗೆ ನಿಷೇಧ;

(ಡಿ) ಕೊಳಾಯಿಗಾರರು ಮತ್ತು ಫಿಟ್ಟರುಗಳಿಗೆ ಲೈಸೆನ್ಸು ಕೊಡುವುದು ಮತ್ತು ಲೈಸೆನ್ಸ ಪಡೆದ ಕೊಳಾಯಿಗಾರರು ಮತ್ತು ಫಿಟ್ಟರುಗಳ ಕಡ್ಡಾಯ ನಿಯೋಜನೆ

- ಇವುಗಳಿಗೆ ಉಪಬಂಧಿಸಬಹುದು.

(3) ಈ ಪ್ರಕರಣದ ಮೇರೆಗೆ ಯಾವುದೇ ವಿನಿಯಮವನ್ನು ರಚಿಸುವಲ್ಲಿ ಮಂಡಲಿಯು, ಅದರ ಉಲ್ಲಂಘನೆಯು ಒಂದು ಸಾವಿರ ರೂಪಾಯಿಗಳಿಗೆ ವಿಸ್ತರಿಸಬಹುದಾದಂಥ ಜುಲ್ಮಾನೆಯಿಂದ ಮತ್ತು ಉಲ್ಲಂಘನೆಯು ಮುಂದುವರಿಯುತ್ತಿರುವ ಸಂದರ್ಭದಲ್ಲಿ, ಅಂಥ ಉಲ್ಲಂಘನೆಯನ್ನು ಮುಂದುವರಿಸದಿರಲು ಮಂಡಲಿಯಿಂದ ನೋಟೀಸನ್ನು ಸ್ವೀಕರಿಸಿದ ತರುವಾಯ, ಉಲ್ಲಂಘನೆಯು ಮುಂದುವರಿಯುತ್ತಿರುವಂಥ ಅವಧಿಯಲ್ಲಿ ಪ್ರತಿಯೊಂದು ದಿವಸಕ್ಕಾಗಿ ಹತ್ತು ರೂಪಾಯಿಗಳಿಗೆ ವಿಸ್ತರಿಸಬಹುದಾದಂಥ ಹೆಚ್ಚಿನ ಜುಲ್ಮಾನೆಯಿಂದ ದಂಡನೀಯವಾಗತಕ್ಕುದೆಂದು ಉಪಬಂಧಿಸಬಹುದು.

**61ಎ. ನೀರು ಸರಬರಾಜಿನ ಬಗ್ಗೆ ಉಪವಿಧಿಗಳು:-** ನಿಯಮಗಳು ಮತ್ತು ವಿನಿಯಮಗಳ ಉಪಬಂಧಗಳಿಗೆ ಒಳಪಟ್ಟು, ಮಂಡಲಿಯು ಪೂರ್ವ ಪ್ರಕಟಣೆಯ ತರುವಾಯ,-

(ಎ) ಮಂಡಲಿಯ ನೀರು ಸರಬರಾಜು ಗೃಹದಿಂದ ನೀರಿನ ಸರಬರಾಜನ್ನು ಯಾವುದೇ ಆವರಣಕ್ಕೆ ಒಯ್ಯುವುದಕ್ಕಾಗಿ ಸರಬರಾಜು ಕೊಳವೆಗಳ ಜೋಡಣೆ;

(ಬಿ) ಮಂಡಲಿಯ ನೀರು ಸರಬರಾಜು ಗೃಹದೊಂದಿಗೆ ಜೋಡಣೆಗಳನ್ನು ಮಾಡುವುದು ಮತ್ತು ನವೀಕರಿಸುವುದು;

(ಸಿ) ಜೋಡಣೆಗಳ ಸ್ಥಾನವನ್ನು ಬದಲಾಯಿಸಲು ಮಂಡಲಿಯ ಅಧಿಕಾರ;

(ಡಿ) ಅಧಿಭೋಗದಾರರಿಗೆ ಸರಬರಾಜು ಮಾಡಿದ ನೀರಿನ ನ್ಯಾಯಸಮ್ಮತ ವಿತರಣೆ;

(ಇ) ಮಂಡಲಿಯ ಯಾವುದೇ ನೀರು ಸರಬರಾಜು ಗೃಹದೊಂದಿಗಿನ ಯಾವುದೇ ಜೋಡಣೆ ಅಥವಾ ಅದರಿಂದ ಯಾವುದೇ ಸಂಪರ್ಕದ ಉದ್ದೇಶಕ್ಕಾಗಿ ಉಪಯೋಗಿಸಬೇಕಾದ ಕೊಳವೆಗಳು ಮತ್ತು ಜೋಡಣೆಗಳ ಗಾತ್ರ, ಸಾಮಗ್ರಿ, ಗುಣಮಟ್ಟ, ವಿವರಣೆ ಮತ್ತು ಸ್ಥಾನ ಮತ್ತು ಕೊಳವೆಗಳು ಮತ್ತು ಜೋಡಣೆಗಳ ಮೇಲೆ ಮುದ್ರೆ ಹಾಕುವುದು ಮತ್ತು ಅಂಥ ಮುದ್ರೆ ಹಾಕುವುದಕ್ಕಾಗಿನ ಫೀಜು;

(ಎಫ್) ಯಾವುದನ್ನು ಈ ಅಧಿನಿಯಮದ ಉಪಬಂಧಗಳ ಮೇರೆಗೆ, ಪರೀಕ್ಷೆಮಾಡಿದ ಮೇಲೆ ಅವುಗಳನ್ನು ಪರಿಣಾಮಕಾರಿಯಾಗಿ ದುರಸ್ತಿ ಮಾಡಲಾಗದಷ್ಟು ದೋಷಪೂರಿತವಾಗಿರುವುದು ಕಂಡು ಬಂದಿದೆಯೋ ಆ ಯಾವುದೇ ಕೊಳವೆಗಳು, ತೊಟ್ಟಿಗಳು ಮತ್ತು ಜೋಡಣೆಗಳ ಗಾತ್ರ, ಸಾಮಗ್ರಿ, ಗುಣಮಟ್ಟ ಮತ್ತು ವಿವರಣೆ;

(ಜಿ) ಅಳತೆಯ ಮೂಲಕ ನೀರನ್ನು ಸರಬರಾಜು ಮಾಡಿದಾಗ ಮೀಟರುಗಳ ವ್ಯವಸ್ಥೆ ಮತ್ತು ನಿರ್ವಹಣೆ;

1. 1966ರ ಅಧಿನಿಯಮ ಸಂಖ್ಯೆ 6ರ ಮೂಲಕ 17.3.1966 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(ಹೆಚ್) ಕೊಳವೆಗಳು, ತೊಟ್ಟಿಗಳು ಮತ್ತು ಇತರ ನೀರು ಸರಬರಾಜು ಗೃಹಗಳ ನಿರ್ವಹಣೆ

- ಇವುಗಳಿಗಾಗಿ ವ್ಯವಸ್ಥೆ ಮಾಡಲು ಉಪವಿಧಿಗಳನ್ನು ರಚಿಸಬಹುದು.][1]

**62. ಕೆಲವು ಅಪರಾಧಗಳಿಗಾಗಿ ದಂಡನೆ:-** ಯಾರೇ ಆಗಲಿ,-

(ಎ) ಈ ಕೆಳಕಂಡ ಕೋಷ್ಟಕದ ಮೊದಲನೇ ಅಂಕಣದಲ್ಲಿ ನಮೂದುಮಾಡಿದ ಈ ಅಧಿನಿಯಮದ ಯಾವುದೇ ಉಪಬಂಧವನ್ನು ಉಲ್ಲಂಘಿಸಿದರೆ; ಅಥವಾ

(ಬಿ) ಸದರಿ ಯಾವುದೇ ಉಪಬಂಧದ ಮೇರೆಗೆ ಅವನಿಗೆ ಕಾನೂನು ಸಮ್ಮತವಾಗಿ ಕೊಟ್ಟ ಯಾವುದೇ ಆದೇಶ ಅಥವಾ ನಿರ್ದೇಶನವನ್ನು ಅಥವಾ ಅವನಿಗೆ ಕಾನೂನು ಸಮ್ಮತವಾಗಿ ಮಾಡಿಕೊಂಡ ಯಾವುದೇ ಕಡ್ಡಾಯ ಕೋರಿಕೆಯನ್ನು ಪಾಲಿಸಲು ತಪ್ಪಿದರೆ ಅವನು,-

(i) ಸದರಿ ಕೋಷ್ಟಕದ ಮೂರನೇ ಅಂಕಣದಲ್ಲಿ ಅದರ ಬಗ್ಗೆ ನಿರ್ದಿಷ್ಟಪಡಿಸಿದ ಮೊಬಲಗಿಗೆ ವಿಸ್ತರಿಸಬಹುದಂಥ ಜುಲ್ಮಾನೆಯಿಂದ; ಮತ್ತು

(ii) ಮುಂದುವರಿಯುತ್ತಿರುವ ಉಲ್ಲಂಘನೆ ಅಥವಾ ತಪ್ಪುವಿಕೆಯ ಸಂದರ್ಭದಲ್ಲಿ ಅಂಥ ಮೊದಲನೆ ಉಲ್ಲಂಘನೆ ಅಥವಾ ತಪ್ಪುವಿಕೆಗಾಗಿ ಅಪರಾಧವು ನಿರ್ಣಯವಾದ ತರುವಾಯ, ಅಂಥ ಉಲ್ಲಂಘನೆ ಅಥವಾ ತಪ್ಪುವಿಕೆಯು ಮುಂದುವರಿಯುತ್ತಿರುವಂಥ ಕಾಲದಲ್ಲಿ ಪ್ರತಿಯೊಂದು ದಿವಸಕ್ಕಾಗಿ ಆ ಕೋಷ್ಟಕದ ನಾಲ್ಕನೇ ಅಂಕಣದಲ್ಲಿ ನಿರ್ದಿಷ್ಟಪಡಿಸಿದ ಮೊಬಲಗಿಗೆ ವಿಸ್ತರಿಸಬಹುದಾದಂಥ ಹೆಚ್ಚಿನ ಜುಲ್ಮಾನೆಯಿಂದ ದಂಡನೀಯನಾಗತಕ್ಕುದು.

**ಕೋಷ್ಟಕ**

| ಅಧಿನಿಯಮದ ಉಪಬಂಧಗಳು | ವಿಷಯ | ವಿಧಿಸಬಹುದಾದಂಥ ಗರಿಷ್ಠ ಜುಲ್ಮಾನೆ | ವಿಧಿಸಬಹುದಾದಂಥ ನಿತ್ಯದ ಜುಲ್ಮಾನೆ |
|---|---|---|---|
| 1 | 2 | 3 | 4 |
| | | ರೂಪಾಯಿಗಳು | ರೂಪಾಯಿಗಳು |
| ಪ್ರಕರಣ 28 | ನೀರು ಸರಬರಾಜನ್ನು ಜೋಡಿಸಿರುವ ಆವರಣದ ಮೇಲೆ ಅತಿಕ್ರಮಣ ಮಾಡುವುದು. | 50 | - |
| ಪ್ರಕರಣ 30 | ವಿನಿಯಮಗಳಿಗೆ ಅನುಗುಣವಾಗಿ ಮನೆ ಜೋಡಣೆಗಳನ್ನು ಇಟ್ಟುಕೊಂಡುಬರುವುದಕ್ಕೆ ತಪ್ಪುವುದು. | 50 | - |
| ಪ್ರಕರಣ 32 ಉಪಪ್ರಕರಣ (2) | ಸರಿಯಾದ ನೀರು ಸರಬರಾಜು ಇಲ್ಲದ ಮನೆಯನ್ನು ಅಧಿಭೋಗಿಸುವುದು ಅಥವಾ ಅಧಿಭೋಗಕ್ಕೆ ಅವಕಾಶ ಮಾಡಿಕೊಡುವುದು. | 50 | - |
| ಪ್ರಕರಣ 32 ಉಪಪ್ರಕರಣ 3 | ಮನೆ ಜೋಡಣೆಗಳನ್ನು ಮಾಡುವ ಬಗ್ಗೆ ಕಡ್ಡಾಯ ಕೋರಿಕೆಯನ್ನು ಪಾಲಿಸಲು ತಪ್ಪುವುದು. | 50 | 5 |
| ಪ್ರಕರಣ 34 | ಗೃಹ ಕೃತ್ಯದ ಉದ್ದೇಶಗಳಿಗಾಗಿ ಸರಬರಾಜು ಮಾಡಿದ ನೀರನ್ನು ಗೃಹೇತರ ಉದ್ದೇಶಗಳಿಗಾಗಿ ಉಪಯೋಗಿಸುವುದು. | 100 | 5 |
| ಪ್ರಕರಣ 49 | ನೀರಿನ ಪೋಲು ಅಥವಾ ಅದರ ದುರುಪಯೋಗ. | 50 | - |
| ಪ್ರಕರಣ 50 | ಪ್ರವೇಶ ಇತ್ಯಾದಿಗಳ ನಿರಾಕರಣೆ. | 100 | - |

| 1 | 2 | 3 | 4 |
|---|---|---|---|
| ಪ್ರಕರಣ 52, ಉಪಪ್ರಕರಣ (1) | ನೀರಿನ ಕೊಳವೆಗಳ, ಇತ್ಯಾದಿಗಳನ್ನು ಅವುಗಳಿಗೆ ಹಾನಿಯಾಗುವ ಅಥವಾ ಅದರಲ್ಲಿ ನೀರು ಮಲಿನವಾಗುವ ಸ್ಥಾನದಲ್ಲಿ ಹಾಕುವುದು. | 100 | 5 |
| ಪ್ರಕರಣ 52 ಉಪಪ್ರಕರಣ (2) | ಕೊಳವೆಗಳು ಹಾನಿಗೊಳ್ಳಬಹುದಾದ ಅಥವಾ ಅದರಲ್ಲಿನ ನೀರು ಮಲಿನಗೊಳ್ಳುವ ಸ್ಥಾನದಲ್ಲಿ ಕಕ್ಕಸುಗಳು, ಇತ್ಯಾದಿಗಳನ್ನು ನಿರ್ಮಿಸುವುದು. | - | 100 |
| ಪ್ರಕರಣ 59 ಉಪಪ್ರಕರಣ (1) | ಲೈಸೆನ್ಸು ಪಡೆದ ಕೊಳಾಯಿಗಾರನನ್ನು ಹೊರತುಪಡಿಸಿ ಯಾವನೇ ಇತರ ವ್ಯಕ್ತಿಯಿಂದ ಕಾಮಗಾರಿಯ ನಿರ್ವಹಣೆ. | 200 | - |
| ಪ್ರಕರಣ 59 ಉಪಪ್ರಕರಣ (2) | ಅಗತ್ಯಪಡಿಸಿದಾಗ ನಿಯೋಜಿಸಿಕೊಂಡ ಲೈಸೆನ್ಸ ಪಡೆದ ಕೊಳಾಯಿಗಾರನ ಹೆಸರನ್ನು ಒದಗಿಸಲು ತಪ್ಪುವುದು. | 100 | - |
| ಪ್ರಕರಣ 59 ಉಪಪ್ರಕರಣ (6) | ಲೈಸೆನ್ಸ್ ಪಡೆದ ಕೊಳಾಯಿಗಾರನು ನಿಯಮಿಸಿದ ಚಾರ್ಜುಗಳಿಗಿಂತ ಹೆಚ್ಚಿನದನ್ನು ತಗಾದೆ ಮಾಡಕೂಡದು. | 100 | - |
| ಪ್ರಕರಣ 59 ಉಪಪ್ರಕರಣ (8) | ಲೈಸೆನ್ಸ್ ಪಡೆದ ಕೊಳಾಯಿಗಾರರು ವಿನಿಯಮಗಳನ್ನು ಉಲ್ಲಂಘಿಸಬಾರದು ಅಥವಾ ಅಜಾಗರೂಕತೆಯಿಂದ ಅಥವಾ ನಿರ್ಲಕ್ಷತೆಯಿಂದ ಕಾಮಗಾರಿಯನ್ನು ನಿರ್ವಹಿಸಬಾರದು. | 100 | - |
| ಪ್ರಕರಣ 60 | ನೀರು ಸರಬರಾಜು ಗೃಹಕ್ಕೆ ಸಂಬಂಧಪಟ್ಟಂತೆ ಉದ್ದೇಶಪೂರ್ವಕ ಅಥವಾ ನಿರ್ಲಕ್ಷ್ಯತೆಯ ಕಾರ್ಯಗಳ ಬಗ್ಗೆ ನಿಷೇಧ. | 100 | - |

## ಅಧ್ಯಾಯ -V

### ಗ್ರಾಮಸಾರ ಚರಂಡಿ ಮತ್ತು ಗ್ರಾಮಸಾರ ಚರಂಡಿ ವ್ಯವಸ್ಥೆ

**63. ಗ್ರಾಮಸಾರ ಚರಂಡಿ, ಇತ್ಯಾದಿಗಳು ಮಂಡಳಿಯಲ್ಲಿ ನಿಹಿತಗೊಳ್ಳುವುದು :-** (1) ಈ ಅಧ್ಯಾಯವು ಜಾರಿಗೆ ಬರುವ ದಿನಾಂಕದಂದು ಮತ್ತು ಅಂದಿನಿಂದ ಬೆಂಗಳೂರು ಮಹಾನಗರ ಪ್ರದೇಶದ ಒಳಗಿರುವ ಯಾವುದೇ ಸಾರ್ವಜನಿಕ ಬೀದಿಯಲ್ಲಿನ ಅದರಗುಂಟ ಇರುವ ಅಥವಾ ಅದರ ಕೆಳಗೆ ಇರುವ ಎಲ್ಲಾ ಸಾರ್ವಜನಿಕ ಗ್ರಾಮಸಾರ ಚರಂಡಿಗಳು ಮತ್ತು ಎಲ್ಲಾ ಗ್ರಾಮಸಾರ ಚರಂಡಿಗಳು ಮತ್ತು ಬೆಂಗಳೂರು ನಗರ ನಿಗಮದ ಮುನಿಸಿಪಲ್ ನಿಧಿಯಿಂದಾಗಲಿ ಅಥವಾ ಅನ್ಯಥಾವಾಗಿಯೇ ಆಗಲಿ ನಿರ್ಮಿಸಿರುವ ಎಲ್ಲಾ ಗ್ರಾಮಸಾರ ವಿಲೆ ಕಾಮಗಾರಿಗಳು ಮತ್ತು ಅವುಗಳಿಗೆ ಸಂಬಂಧಪಟ್ಟ ಎಲ್ಲಾ ಕಾಮಗಾರಿಗಳು, ಸಾಮಗ್ರಿಗಳು ಮತ್ತು ವಸ್ತುಗಳು ಮಂಡಳಿಯಲ್ಲಿ ನಿಹಿತಗೊಳ್ಳತಕ್ಕುದು.

(2) ಮಂಡಳಿಯಲ್ಲಿ ನಿಹಿತಗೊಂಡಿರುವಂಥ ಎಲ್ಲಾ ಸಾರ್ವಜನಿಕ ಮತ್ತು ಇತರ ಗ್ರಾಮಸಾರ ಚರಂಡಿಗಳನ್ನು ಈ ಅಧಿನಿಯಮದಲ್ಲಿ ಇನ್ನು ಮುಂದೆ ಮಂಡಲಿಯ ಗ್ರಾಮಸಾರ ಚರಂಡಿಗಳೆಂದು ಉಲ್ಲೇಖಿಸಲಾಗಿದೆ.

(3) ಯಾವುದೇ ಅಂಥ ಗ್ರಾಮಸಾರ ಚರಂಡಿ ಅಥವಾ ಗ್ರಾಮಸಾರ ವಿಲೆ ಕಾಮಗಾರಿಯನ್ನು ವಿಸ್ತಾರಗೊಳಿಸುವ, ಆಳಗೊಳಿಸುವ ಅಥವಾ ಅನ್ಯಥಾ ದುರಸ್ತಿ ಮಾಡುವ ಅಥವಾ ಇಟ್ಟುಕೊಂಡು ಬರುವ ಉದ್ದೇಶಗಳಿಗಾಗಿ, ಸದರಿ ಉದ್ದೇಶಗಳಿಗಾಗಿ ಅವಶ್ಯವಾಗಬಹುದಾದಷ್ಟರ ಮಟ್ಟಿಗೆ ಅದಕ್ಕೆ ಸಂಬಂಧಪಟ್ಟ ಒಳ ಮಣ್ಣು ಸಹ ಮಂಡಲಿಯಲ್ಲಿ ನಿಹಿತವಾಗಿದೆಯೆಂದು ಭಾವಿಸತಕ್ಕುದು.

(4) (ಎ) ಈ ಅಧಿನಿಯಮವು ಪ್ರಾರಂಭವಾಗುವುದಕ್ಕೆ ಮುಂಚಿಯೇ ಆಗಲಿ ಅಥವಾ ಆ ತರುವಾಯವೇ ಆಗಲಿ; ಮತ್ತು

(ಬಿ) ಅಂಥ ಆವರಣದ ಒಡೆಯ ಅಥವಾ ಅಧಿಭೋಗದಾರನ ಉಪಯೋಗಕ್ಕಾಗಿಯೇ ಆಗಲಿ ಅಥವಾ ಇಲ್ಲದಿರಲಿ

- ನಿಗಮಕ್ಕೆ ಸೇರಿಲ್ಲದ ಆವರಣದಲ್ಲಿ ಅಥವಾ ಅದರ ಮೇಲೆ ನಿಗಮದ ಮುನಿಸಿಪಲ್ ನಿಧಿಯಿಂದ ಕಟ್ಟಿದ, ನಿರ್ಮಿಸಿದ ಅಥವಾ ಸ್ಥಾಪಿಸಿದ, ಗ್ರಾಮಸಾರ ಚರಂಡಿ ಕಾಮಗಾರಿಗಳಿಗೆ ಸಂಬಂಧಪಟ್ಟ ಎಲ್ಲಾ ಗ್ರಾಮಸಾರ ಚರಂಡಿಗಳು ಮತ್ತು ವಾಯುಸಂಚಾರ ಸುರಂಗಗಳು, ಕೊಳವೆಗಳು ಮತ್ತು ಎಲ್ಲಾ ಸಾಧನಸಾಮಗ್ರಿಗಳು ಮತ್ತು ಜೋಡಣೆಗಳು, ನಿಗಮವು ಅನ್ಯಥಾ ನಿರ್ಧರಿಸಿದ್ದ ಅಥವಾ ಯಾವುದೇ ಕಾಲದಲ್ಲಿ ಅನ್ಯಥಾ ನಿರ್ಧರಿಸುವ ಹೊರತು, ಮಂಡಳಿಯಲ್ಲಿ ನಿಹಿತಗೊಳ್ಳತಕ್ಕುದು.

**64. ಗ್ರಾಮಸಾರ ಚರಂಡಿಗಳು ಮತ್ತು ಗ್ರಾಮಸಾರ ವಿಲೆ ಕಾಮಗಾರಿಗಳ ನಿಯಂತ್ರಣ:-** (1) ಎಲ್ಲಾ ಸರ್ಕಾರಿ ಗ್ರಾಮಸಾರ ಚರಂಡಿಗಳು, ಎಲ್ಲಾ ಗ್ರಾಮಸಾರ ವಿಲೆ ಕಾಮಗಾರಿಗಳು ಮತ್ತು ಅದಕ್ಕೆ ಸಂಬಂಧಪಟ್ಟ ಎಲ್ಲಾ ಕಾಮಗಾರಿಗಳು, ಸಾಮಗ್ರಿಗಳು ಮತ್ತು ವಸ್ತುಗಳು ಮಂಡಳಿಯ ನಿಯಂತ್ರಣದಲ್ಲಿ ಇರತಕ್ಕುದು.

(2) ಮಂಡಳಿಯು, ಮಂಡಳಿಯ ಎಲ್ಲಾ ಗ್ರಾಮಸಾರ ಚರಂಡಿಗಳು ಮತ್ತು ಗ್ರಾಮಸಾರ ವಿಲೆ ಕಾಮಗಾರಿಗಳನ್ನು ಇಟ್ಟುಕೊಂಡು ಬರತಕ್ಕುದು ಮತ್ತು ದುರಸ್ತಿಯಲ್ಲಿ ಇಡತಕ್ಕುದು ಮತ್ತು ಬೆಂಗಳೂರು ಮಹಾನಗರ ಪ್ರದೇಶದ ಪರಿಣಾಮಕಾರಿ ಗ್ರಾಮಸಾರ ಚರಂಡಿ ವ್ಯವಸ್ಥೆ ಮತ್ತು ಗ್ರಾಮಸಾರ ವಿಲೆಗಾಗಿ ಕಾಲಕಾಲಕ್ಕೆ ಅವಶ್ಯವಾಗಬಹುದಾದಷ್ಟು ಹೊಸ ಚರಂಡಿಗಳು ಮತ್ತು ಗ್ರಾಮಸಾರ ವಿಲೆ ಕಾಮಗಾರಿಗಳನ್ನು ನಿರ್ಮಿಸತಕ್ಕುದು.

**65. ಮಂಡಳಿಯ ಗ್ರಾಮಸಾರ ಚರಂಡಿಗಳೊಳಕ್ಕೆ ಕೆಲವು ವಸ್ತುಗಳನ್ನು ಬಿಡಬಾರದು:-** (1) ಯಾವನೇ ವ್ಯಕ್ತಿಯು ಮಂಡಳಿಯ ಯಾವುದೇ ಗ್ರಾಮಸಾರ ಚರಂಡಿಯೊಳಕ್ಕೆ ಅಥವಾ ಮಂಡಳಿಯ ಗ್ರಾಮಸಾರ ಚರಂಡಿಯೊಂದಿಗೆ ಸಂಪರ್ಕವನ್ನು ಹೊಂದಿರುವ ಯಾವುದೇ ಚರಂಡಿ ಗ್ರಾಮಸಾರ ಚರಂಡಿಯೊಳಕ್ಕೆ -

(ಎ) ಗ್ರಾಮಸಾರ ಚರಂಡಿಗೆ ಹಾನಿಯನ್ನುಂಟುಮಾಡುವ ಅಥವಾ ಅದರಲ್ಲಿರುವುದು ಸರಾಗವಾಗಿ ಹರಿದುಹೋಗುವುದಕ್ಕೆ ಅಡ್ಡಿಯನ್ನುಂಟುಮಾಡುವ ಅಥವಾ ಅದರ ಬಳಿಗೆ ಇರುವುದರ ಸಂಸ್ಕರಣೆ ಮತ್ತು ಅದನ್ನು ವಿಲೆ ಮಾಡುವುದಕ್ಕೆ ಪ್ರತಿಕೂಲವಾಗಿ ಬಾಧಕವನ್ನುಂಟುಮಾಡುವ ಸಂಭವವಿರುವ ಯಾವುದೇ ವಸ್ತುವನ್ನು; ಅಥವಾ

(ಬಿ) ಯಾವ ಕಸ ಅಥವಾ ಆವಿ ಅಥವಾ ದ್ರವವನ್ನು ಹಾಗೆ ಕಾಯಿಸಿದಾಗ ಒಂಟಿಯಾಗಿಯೇ ಆಗಲಿ ಅಥವಾ ಆ ಗ್ರಾಮಸಾರ ಚರಂಡಿಯಲ್ಲಿರುವುದರೊಂದಿಗೆ ಸಂಯೋಜನೆಗೊಂಡಾಗಲಿ ಅಪಾಯಕಾರಿಯಾಗಿರುವುದೋ ಅಥವಾ ಉಪದ್ರವದ ಕಾರಣವಾಗಿಯೋ ಅಥವಾ ಆರೋಗ್ಯಕ್ಕೆ ಪ್ರತಿಕೂಲವಾಗಿರುವುದೋ ಆ ಕಸ ಅಥವಾ ಆವಿ ಅಥವಾ ದ್ರವವಾಗಿರುವ [1][ಮಂಡಳಿಯು ಅಧಿಸೂಚನೆಯ ಮೂಲಕ ನಿರ್ದಿಷ್ಟಪಡಿಸಬಹುದಾದಂಥ ಉಷ್ಣಾಂಶದ][1] ಯಾವುದೇ ರಾಸಾಯನಿಕ ಕಸ ಅಥವಾ ನಿರುಪಯುಕ್ತ ಆವಿ ಅಥವಾ ಯಾವುದೇ ದ್ರವವನ್ನು; ಅಥವಾ

(ಸಿ) ಯಾವುದೇ ಅಪಾಯಕಾರಿ ಪೆಟ್ರೋಲಿಯಂ ಅನ್ನು

- ಎಸೆಯತಕ್ಕುದಲ್ಲ, ಬರಿದುಮಾಡತಕ್ಕುದಲ್ಲ ಅಥವಾ ತಿರುಗಿಸತಕ್ಕುದಲ್ಲ.

(2) ಈ ಪ್ರಕರಣದಲ್ಲಿ "ಅಪಾಯಕಾರಿ ಪೆಟ್ರೋಲಿಯಂ" ಎಂಬ ಪದಾವಳಿಯು, ಪೆಟ್ರೋಲಿಯಂ ಅಧಿನಿಯಮ, 1934 (1934ರ ಕೇಂದ್ರ ಅಧಿನಿಯಮ 30)ದಲ್ಲಿ ಇರುವಂಥವೇ ಅರ್ಥವನ್ನು ಹೊಂದಿರುತ್ತದೆ.

1. 1966ರ ಅಧಿನಿಯಮ ಸಂಖ್ಯೆ 6ರ ಮೂಲಕ 17.3.1966 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

**66. ಮಂಡಳಿಯ ಗ್ರಾಮಸಾರ ಚರಂಡಿಗೆ ಹರಿಸಲು ಒಡೆಯರು ಮತ್ತು ಅಧಿಭೋಗದಾರರಿಂದ ಅರ್ಜಿ:-** (1) ಈ ಬಗ್ಗೆ ರಚಿಸಿದ ವಿನಿಯಮಗಳ ಮೂಲಕ ನಿಯಮಿಸಬಹುದಾದಂಥ ಷರತ್ತುಗಳಿಗೆ ಒಳಪಟ್ಟು, ಖಾಸಗಿ ಚರಂಡಿಯನ್ನು ಹೊಂದಿರುವ ಯಾವುದೇ ಆವರಣದ ಒಡೆಯ ಅಥವಾ ಅಧಿಭೋಗದಾರನು ಅಥವಾ ಬೆಂಗಳೂರು ಮಹಾನಗರ ಪ್ರದೇಶದೊಳಗಿನ ಯಾವುದೇ ಖಾಸಗಿ ಚರಂಡಿಯ ಒಡೆಯನು, ಮಂಡಳಿಯ ಗ್ರಾಮಸಾರ ಚರಂಡಿಗಳೊಂದಿಗೆ ಅವನ ಚರಂಡಿಯು ಸಂಪರ್ಕವನ್ನು ಹೊಂದಲು ಮತ್ತು ಆ ಮೂಲಕ ಆ ಆವರಣ ಅಥವಾ ಆ ಖಾಸಗಿ ಚರಂಡಿಯಿಂದ ಮಲಿನ ನೀರು ಅಥವಾ ಮೇಲ್ನೀರನ್ನು ಹರಿಸಲು ಮಂಡಲಿಗೆ ಅರ್ಜಿಯನ್ನು ಮಾಡಿಕೊಳ್ಳಬಹುದು:

ಪರಂತು, ಈ ಉಪಪ್ರಕರಣದಲ್ಲಿರುವುದು ಯಾವುದೂ, ಯಾವನೇ ವ್ಯಕ್ತಿಗೆ ಮಂಡಲಿಯ ಯಾವುದೇ ಗ್ರಾಮಸಾರ ಚರಂಡಿಯೊಳಕ್ಕೆ ನೇರವಾಗಿ ಅಥವಾ ಪರೋಕ್ಷವಾಗಿ,-

(i) ಈ ಬಗ್ಗೆ ರಚಿಸಿದ ವಿನಿಯಮಗಳಿಗೆ ಅನುಸಾರವಾಗಿ ಅಲ್ಲದೆ ಯಾವುದೇ ಕಾರ್ಖಾನೆ ಆವರಣದಿಂದ ಯಾವುದೇ ಕಾರ್ಖಾನೆಯ ಕಲ್ಮಷ ಪ್ರವಾಹವನ್ನು; ಅಥವಾ

(ii) ಯಾವುದನ್ನು ಹರಿಸುವುದನ್ನು ಈ ಅಧಿನಿಯಮ ಅಥವಾ ಯಾವುದೇ ಇತರ ಕಾನೂನಿನ ಮೂಲಕ ಅಥವಾ ಅದರ ಮೇರೆಗೆ ಮಂಡಲಿಯ ಗ್ರಾಮಸಾರ ಚರಂಡಿಗಳಿಗೆ ನಿಷೇದಿಸಲಾಗಿದೆಯೋ ಆ ಯಾವುದೇ ದ್ರವ ಅಥವಾ ಇತರ ವಸ್ತುವನ್ನು

- ಹರಿಸಲು ಹಕ್ಕುಳ್ಳವನಾಗಿರತಕ್ಕುದಲ್ಲ.

(2) (1)ನೇ ಉಪಪ್ರಕರಣದ ಉಪಬಂಧಗಳನ್ನು ಅವನು ಉಪಯೋಗಿಸಿಕೊಳ್ಳುವ ಇಚ್ಛೆಯುಳ್ಳ ಯಾವನೇ ವ್ಯಕ್ತಿಯು, ಅವನ ಪ್ರಸ್ತಾವಗಳ ಬಗ್ಗೆ ನೋಟೀಸನ್ನು ಮಂಡಳಿಗೆ ಕೊಡತಕ್ಕುದು ಮತ್ತು ಅದನ್ನು ಸ್ವೀಕರಿಸಿದ ತರುವಾಯ ಒಂದು ತಿಂಗಳೊಳಗೆ ಯಾವುದೇ ಕಾಲದಲ್ಲಿ ಮಂಡಳಿಯು, ಅವನಿಗೆ ನೋಟೀಸು ಕೊಡುವ ಮೂಲಕ ಆ ಚರಂಡಿಯನ್ನು ನಿರ್ಮಿಸುವ ವಿಧಾನ ಅಥವಾ ಅದರ ಸ್ಥಿತಿಯು ಆ ಸಂಪರ್ಕವನ್ನುಂಟು ಮಾಡುವುದು ಗ್ರಾಮಸಾರ ಚರಂಡಿ ವ್ಯವಸ್ಥೆಗೆ ಪ್ರತಿಕೂಲವಾಗುವಂಥದು ಎಂದು ಕಂಡುಬಂದರೆ, ಸಂಪರ್ಕವನ್ನುಂಟುಮಾಡಲು ಅನುಮತಿಯನ್ನು ನಿರಾಕರಿಸಬಹುದು ಮತ್ತು ಚರಂಡಿಯ ನಿರ್ಮಾಣದ ವಿಧಾನ ಮತ್ತು ಅದರ ಸ್ಥಿತಿಯನ್ನು ಪರೀಕ್ಷಿಸುವ ಉದ್ದೇಶಕ್ಕಾಗಿ ಅವಶ್ಯವಾದರೆ ಪರಿಶೀಲನೆಗಾಗಿ ಅದನ್ನು ತೆರೆದಿಡುವಂತೆ ಅದು ಅಗತ್ಯ ಪಡಿಸಬಹುದು.

(3) ಮಂಡಳಿಯು, ಅದು ಸೂಕ್ತವೆಂದು ಯೋಚಿಸಿದರೆ, ಸಾರ್ವಜನಿಕ ಬೀದಿಯಲ್ಲಿ ಅಥವಾ ಅದರ ಕೆಳಗೆ ಇರುವಂಥ ಮಂಡಳಿಯ ಗ್ರಾಮಸಾರ ಚರಂಡಿಯೊಂದಿಗೆ ಖಾಸಗಿ ಚರಂಡಿಯನ್ನು ಕೂಡಿಸುವುದಕ್ಕಾಗಿ ಅವಶ್ಯವಾದ ಕಾಮಗಾರಿಯ ಅಂಥ ಭಾಗವನ್ನು ನಿರ್ಮಿಸಬಹುದು ಮತ್ತು ಅಂಥ ಸಂದರ್ಭದಲ್ಲಿ ಮಂಡಲಿಯು ವಹಿಸಿದ ವೆಚ್ಚಗಳನ್ನು ಆ ಆವರಣದ ಒಡೆಯ ಅಥವಾ ಅಧಿಭೋಗದಾರನು ಅಥವಾ ಸಂದರ್ಭಾನುಸಾರ ಆ ಖಾಸಗಿ ಚರಂಡಿಯ ಒಡೆಯನು ಸಂದಾಯ ಮಾಡತಕ್ಕುದು ಮತ್ತು ಅವುಗಳನ್ನು ಒಡೆಯ ಅಥವಾ ಅಧಿಭೋಗದಾರನಿಂದ ಈ ಅಧಿನಿಯಮದ ಮೇರೆಗೆ ಸಂದಾಯಮಾಡಬೇಕಾದ ಚಾರ್ಜುಗಳ ಬಾಕಿಯಂತೆ ವಸೂಲು ಮಾಡತಕ್ಕುದು.

**67. ಚರಂಡಿ ವ್ಯವಸ್ಥೆ ಇಲ್ಲದ ಆವರಣದ ಬಗ್ಗೆ ಚರಂಡಿ ವ್ಯವಸ್ಥೆ :-**(1) ಈ ಮಂಡಳಿಯ ಅಭಿಪ್ರಾಯದಲ್ಲಿ ಯಾವುದೇ ಆವರಣಕ್ಕೆ ಸಾಕಷ್ಟು ಪರಿಣಾಮಕಾರಿ ಚರಂಡಿ ವ್ಯವಸ್ಥೆಯ ಸಾಧನವು ಇಲ್ಲವೆಂದು ಕಂಡುಬಂದರೆ, ಮತ್ತು ಸದರಿ ಆವರಣದ ಯಾವುದೇ ಭಾಗದಿಂದ ಮೂವತ್ತೈದು ಮೀಟರುಗಳನ್ನು ಮೀರದ ದೂರದಲ್ಲಿ ಸರ್ಕಾರಿ ಗ್ರಾಮಸಾರ ಚರಂಡಿ ಅಥವಾ ಹೊಲಸು ಮತ್ತು ಇತರ ಕಲುಷಿತ ಮತ್ತು ಅಸಹ್ಯಕರ ವಸ್ತುವನ್ನು ಹೊರಹಾಕುವುದಕ್ಕಾಗಿ ಮಂಡಲಿ ಅನುಮೋದಿಸಿದ ಯಾವುದೇ ಸ್ಥಳವು ಇರುವಲ್ಲಿ ಅದು ಸದರಿ ಆವರಣದ ಒಡೆಯನಿಗೆ ಬರಹದಲ್ಲಿನ ನೋಟೀಸಿನ ಮೂಲಕ -

(ಎ) ಅಂಥ ಸರ್ಕಾರಿ ಗ್ರಾಮಸಾರ ಚರಂಡಿ ಅಥವಾ ಸ್ಥಳಕ್ಕೆ ಹರಿದು ಹೋಗುವಂತೆ ಚರಂಡಿಯನ್ನು ರಚಿಸಲು;

(ಬಿ) ಸದರಿ ಆವರಣದಿಂದ ಹೊಲಸು ಮತ್ತು ಇತರ ಕಲುಷಿತ ಮತ್ತು ಅಸಹ್ಯಕರ ವಸ್ತುವನ್ನು ಸಂಗ್ರಹಿಸಲು ಮತ್ತು ಸ್ವೀಕರಿಸಲು ಮತ್ತು ಅದನ್ನು ಅಲ್ಲಿಂದ ಸಾಗಿಸಲು ಮತ್ತು ಅಂಥ ಚರಂಡಿಯನ್ನು ಮತ್ತು ಅದರೊಂದಿಗೆ ಸೇರಿದ ಪ್ರತಿಯೊಂದು ಜೋಡಣೆಯನ್ನು ಪರಿಣಾಮಕಾರಿಯಾಗಿ ನೀರು ಹರಿಸಿ ಚೊಕ್ಕಟ ಮಾಡುವ ಉದ್ದೇಶಕ್ಕಾಗಿ ಮಂಡಲಿಗೆ ಅವಶ್ಯವೆಂದು ತೋರಬಹುದಾದಂತೆ ಮುಚ್ಚಿದ ರೊಚ್ಚುಗುಂಡಿ ಅಥವಾ ಇಂಗು ಗುಂಡಿ ಮತ್ತು ಜೋಡಣೆಯನ್ನು ನಿರ್ಮಿಸಲು;

(ಸಿ) ಆರೋಗ್ಯಕ್ಕೆ ಹಾನಿಕಾರಕರಾಗಿರುವಂಥ, ಈಗ ಇರುವ ಚರಂಡಿ ಅಥವಾ ಚರಂಡಿ ವ್ಯವಸ್ಥೆಗಾಗಿ ಉಪಯೋಗಿಸಿದ ಅಥವಾ ಉಪಯೋಗಿಸಲು ಉದ್ದೇಶಿಸಿದ ಯಾವುದೇ ಸಾಧನಸಾಮಗ್ರಿ ಅಥವಾ ವಸ್ತುವನ್ನು ತೆಗೆದುಹಾಕಲು;

(ಡಿ) ಆರೋಗ್ಯಕ್ಕೆ ಹಾನಿಕಾರಕವಾಗಿರುವ ಅಥವಾ ಹಾನಿಕಾರಕವಾಗುವ ಸಂಭವವಿರುವಂಥ ತೆರೆದ ಚರಂಡಿಗೆ ಬದಲಾಗಿ ಮುಚ್ಚಿದ ಚರಂಡಿಯನ್ನು ಒದಗಿಸಲು ಅಥವಾ ಹೊಸದಾಗಿಯೇ ಆಗಲಿ ಅಥವಾ ಯಾವುದೇ ಅಸ್ತಿತ್ವದಲ್ಲಿರುವ ಸಾಧನಸಾಮಗ್ರಿ ಅಥವಾ ವಸ್ತುವಿಗೆ ಬದಲಾಗಿಯೇ ಆಗಲಿ ಅಂಥ ಇತರ ಸಾಧನಸಾಮಗ್ರಿ ಅಥವಾ ವಸ್ತುವನ್ನು ಒದಗಿಸಲು ಅಥವಾ ಅಸ್ತಿತ್ವದಲ್ಲಿರುವ ತೆರೆದ ಚರಂಡಿಗೆ ಬದಲಾಗಿ ಮುಚ್ಚಿದ ಚರಂಡಿ ಮತ್ತು ಅಂಥ ಇತರ ಸಾಧನಸಾಮಗ್ರಿ ಅಥವಾ ವಸ್ತು ಇವೆರಡನ್ನೂ ಒದಗಿಸಲು;

(ಇ) ಅವುಗಳನ್ನು ತೊಳೆದಾಗ ಅಂತಸ್ತುಗಳು ಮತ್ತು ಮೊಗಸಾಲೆಗಳಿಂದ ಪೋಲಾದ ನೀರನ್ನು ಸಂಗ್ರಹಿಸುವ ಮತ್ತು ಸ್ವೀಕರಿಸುವ ಮತ್ತು ಅಂಥ ಪೋಲಾದ ನೀರು ಬೀದಿಗಳ ಮೇಲೆ ಅಥವಾ ಆ ಆವರಣದ ಯಾವುದೇ ಕೆಳಭಾಗದ ಒಳಗೆ ನೇರವಾಗಿ ಹರಿದು ಹೋಗುವುದನ್ನು ತಡೆಗಟ್ಟುವ ಹಾಗೆ ಅದನ್ನು ಕೆಳಗೆ ಒಯ್ಯುವ ಕೊಳವೆಗಳಿಂದ ಹರಿನಳಿಕೆಗಳ ಮೂಲಕ ಸಾಗಿಸುವ ಉದ್ದೇಶಕ್ಕಾಗಿ ಮಂಡಳಿಗೆ ಅವಶ್ಯವಾಗಿದೆ ಎಂದು ಕಂಡುಬರುವಂಥ ಎಲ್ಲಾ ಸಾಧನಸಾಮಗ್ರಿಗಳು ಮತ್ತು ಜೋಡಣೆಗಳನ್ನು ಒದಗಿಸಲು ಮತ್ತು ಸ್ಥಾಪಿಸಲು;

(ಎಫ್) ಪರ್ಯಾಪ್ತವಾಗಿಲ್ಲದ, ಸಾಕಷ್ಟಿಲ್ಲದ ಅಥವಾ ದೋಷಪೂರ್ಣವಾಗಿರುವಂಥ ಅಸ್ತಿತ್ವದಲ್ಲಿರುವ ಚರಂಡಿಯನ್ನು ಅಭಿವೃದ್ಧಿಪಡಿಸಲು ಅಥವಾ ಪುನರ್ ರಚಿಸಲು ಯಾವುದೇ ಕಾಮಗಾರಿಯನ್ನು ಮಾಡಲು

- ಅಗತ್ಯಪಡಿಸಬಹುದು.

(2) (1)ನೇ ಉಪಪ್ರಕರಣದಲ್ಲಿ ವ್ಯವಸ್ಥೆಮಾಡಿಲ್ಲದ ಯಾವುದೇ ಸಂದರ್ಭದಲ್ಲಿ ಮಂಡಲಿಯ ಅಭಿಪ್ರಾಯದಲ್ಲಿ ಯಾವುದೇ ಆವರಣಕ್ಕೆ ಪರಿಣಾಮಕಾರಿ ಚರಂಡಿ ವ್ಯವಸ್ಥೆಯ ಸಾಕಷ್ಟು ಸಾಧನಗಳು ಇಲ್ಲದೇ ಇರುವಲ್ಲಿ, ಅದು ಆ ಆವರಣದ ಒಡೆಯನನ್ನು ಬರಹದಲ್ಲಿನ ನೋಟೀಸಿನ ಮೂಲಕ,-

(ಎ) ಅಂಥ ನೋಟೀಸಿನಲ್ಲಿ ನಿಯಮಿಸಬೇಕಾದ, ಆದರೆ ಆ ಆವರಣದ ಯಾವುದೇ ಭಾಗದಿಂದ ಮೂವತ್ತೈದು ಮೀಟರುಗಳಿಗಿಂತ ಹೆಚ್ಚಿನ ದೂರದಲ್ಲಿ ಇಲ್ಲದೆ ಇರುವ ಹಂತದವರೆಗೆ ಚರಂಡಿಯನ್ನು ನಿರ್ಮಿಸಲು; ಅಥವಾ

(ಬಿ) ಮುಚ್ಚಿದ ರೊಚ್ಚುಗುಂಡಿ ಅಥವಾ ಇಂಗು ಗುಂಡಿ ಮತ್ತು ಅಂಥ ರೊಚ್ಚುಗುಂಡಿ ಅಥವಾ ಇಂಗು ಗುಂಡಿಯೊಳಕ್ಕೆ ಹರಿಯುವ ಚರಂಡಿ ಅಥವಾ ಚರಂಡಿಗಳನ್ನು ನಿರ್ಮಿಸಲು

- ಅಗತ್ಯಪಡಿಸಬಹುದು.

(3) (2)ನೇ ಉಪಪ್ರಕರಣದ ಮೇರೆಗೆ ಯಾವುದೇ ಚರಂಡಿಯ ನಿರ್ಮಾಣಕ್ಕಾಗಿನ ಯಾವುದೇ ಕಡ್ಡಾಯ ಕೋರಿಕೆಯು (1)ನೇ ಉಪಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಯಾವುದೇ ವಿವರವನ್ನು ಒಳಗೊಂಡಿರಬಹುದು.

**68. ಹೊಸ ಆವರಣಗಳನ್ನು ಚರಂಡಿಗಳಿಲ್ಲದೆ ನಿರ್ಮಿಸತಕ್ಕುದಲ್ಲ :-** (1) ಯಾವ ಪ್ರದೇಶಗಳಲ್ಲಿ ಮಂಡಳಿಯ ಗ್ರಾಮಸಾರ ಚರಂಡಿಗಳನ್ನು ಒದಗಿಸಲಾಗಿದೆಯೋ ಆ ಪ್ರದೇಶಗಳಲ್ಲಿ ಯಾವುದೇ ಆವರಣವನ್ನು ನಿರ್ಮಿಸುವುದು ಅಥವಾ ಪುನರ್‌ನಿರ್ಮಿಸುವುದು ಅಥವಾ ಅಂಥ ಯಾವುದೇ ಆವರಣವನ್ನು ಅಧಿಭೋಗಕ್ಕೆ ತೆಗೆದುಕೊಳ್ಳುವುದು, -

(ಎ) ಅಂಥ ಆವರಣದ ಪರಿಣಾಮಕಾರಿ ಚರಂಡಿ ವ್ಯವಸ್ಥೆಗಾಗಿ ಮಂಡಲಿಗೆ ಅವಶ್ಯವೆಂದು ಕಂಡುಬರುವಂಥ ಮಟ್ಟ ಮತ್ತು ಇಳಿವಿನೊಂದಿಗೆ ಅಂಥ ಗಾತ್ರ, ಸಾಮಗ್ರಿಗಳು ಮತ್ತು ವಿವರಣೆಗಳ ಚರಂಡಿಯನ್ನು ನಿರ್ಮಿಸಿದ್ದ ಹೊರತು;

(ಬಿ) ಸದರಿ ಆವರಣದಿಂದ ಹೊಲಸು ಮತ್ತು ಇತರ ಕಲುಷಿತ ಮತ್ತು ಅಸಹ್ಯಕರ ವಸ್ತುವನ್ನು ಸಂಗ್ರಹಿಸಲು ಅಥವಾ ಸ್ವೀಕರಿಸಲು ಮತ್ತು ಅಲ್ಲಿಂದ ಅದನ್ನು ಸಾಗಿಸಲು ಮತ್ತು ಸದರಿ ಆವರಣದ ಚರಂಡಿಯ ಮತ್ತು ಅದಕ್ಕೆ ಸೇರಿದ ಪ್ರತಿಯೊಂದು ಜೋಡಣೆಯನ್ನು ಪರಿಣಾಮಕಾರಿಯಾಗಿ ನೀರು ಹರಿಸಿ ತೊಳೆಯುವ ಉದ್ದೇಶಗಳಿಗಾಗಿ ಮಂಡಲಿಗೆ ಅವಶ್ಯವೆಂದು ಕಂಡುಬರಬಹುದಾದಂಥ ಸಾಧನಸಾಮಗ್ರಿಗಳು ಮತ್ತು ಜೋಡಣೆಗಳನ್ನು ಅಂಥ ಆವರಣದ ಮೇಲೆ ಅವುಗಳನ್ನು ಒದಗಿಸಿದ್ದ ಮತ್ತು ನಿರ್ಮಿಸಿದ್ದ ಹೊರತು

- ಕಾನೂನುಬದ್ಧವಾಗಿರತಕ್ಕುದಲ್ಲ.

(2) ಹಾಗೆ ನಿರ್ಮಿಸಿದ ಚರಂಡಿಯು ಮಂಡಳಿಯ ಗ್ರಾಮಸಾರ ಚರಂಡಿಗೆ ಹರಿದುಹೋಗತಕ್ಕುದು.

(3) ಈ ಪ್ರಕರಣದ ಉಪಬಂಧಗಳು, ಆವರಣದ ಯಾವ ಭಾಗವು ಮಂಡಳಿಯ ಗ್ರಾಮಸಾರ ಚರಂಡಿಯಿಂದ ಮೂವತ್ತೈದು ಮೀಟರುಗಳ ದೂರದೊಳಗೆ ಇರುವುದೋ ಆ ಯಾವುದೇ ಭಾಗಕ್ಕೆ ಅನ್ವಯವಾಗತಕ್ಕುದು.

**69. ಸಂಯೋಜಿತ ಕಾರ್ಯಾಚರಣೆಯ ಮೂಲಕ ಆವರಣಗಳ ಗುಂಪು ಅಥವಾ ಬ್ಲಾಕುಗಳಿಗೆ ಚರಂಡಿಯನ್ನು ಒದಗಿಸುವ ಅಧಿಕಾರ:-** (1) ಮಂಡಳಿಗೆ, ಆವರಣಗಳ ಯಾವುದೇ ಗುಂಪು ಅಥವಾ ಬ್ಲಾಕುಗಳಿಗೆ ಪ್ರತ್ಯೇಕವಾಗಿ ಅಲ್ಲದೆ ಸಂಯೋಜಿತವಾಗಿ, ಮಿತವ್ಯಯವಾಗಿ ಅಥವಾ ಅನುಕೂಲಕರವಾಗಿ ಚರಂಡಿಯನ್ನು ಒದಗಿಸಬಹುದೆಂದು ಕಂಡುಬಂದರೆ ಮತ್ತು ಆ ಆವರಣಗಳ ಗುಂಪು ಅಥವಾ ಬ್ಲಾಕಿನ ಯಾವುದೇ ಭಾಗದಿಂದ ಮೂವತ್ತೈದು ಮೀಟರುಗಳೊಳಗೆ ಸಾಕಷ್ಟು ಗಾತ್ರದ ಮಂಡಳಿಯ ಗ್ರಾಮಸಾರ ಚರಂಡಿಯು ಈಗಾಗಲೇ ಇದ್ದರೆ ಅಥವಾ ಸದ್ಯದಲ್ಲೇ ನಿರ್ಮಾಣವಾಗುವುದಿದ್ದರೆ ಮಂಡಳಿಯು ಆ ಆವರಣಗಳ ಗುಂಪು ಅಥವಾ ಬ್ಲಾಕಿಗೆ ಸಂಯೋಜಿತ ಕಾರ್ಯಾಚರಣೆಯ ಮೂಲಕ ಚರಂಡಿಯನ್ನು ಒದಗಿಸುವಂತೆ ಮಾಡಬಹುದು.

(2) ಆವರಣಗಳ ಯಾವುದೇ ಗುಂಪು ಅಥವಾ ಬ್ಲಾಕಿಗೆ ಸಂಬಂಧಿಸಿದಂತೆ (1)ನೇ ಉಪಪ್ರಕರಣದ ಮೇರೆಗೆ ಯಾವುದೇ ಕಾಮಗಾರಿಯನ್ನು ಕಾರ್ಯಗತಗೊಳಿಸಲು ವಹಿಸಿದ ವೆಚ್ಚವನ್ನು ಅಂಥ ಆವರಣಗಳ ಒಡೆಯರು ಮಂಡಳಿಯು ನಿರ್ಧರಿಸಬಹುದಾದಂಥ ಪ್ರಮಾಣದಲ್ಲಿ ಸಂದಾಯಮಾಡತಕ್ಕುದು ಮತ್ತು ಅವುಗಳು ಈ ಅಧಿನಿಯಮದ ಮೇರೆಗೆ ಸಂದಾಯಮಾಡಬೇಕಾದ ಚಾರ್ಜುಗಳ ಬಾಕಿಯಂತೆ ಅವರಿಂದ ವಸೂಲೀಯವಾಗತಕ್ಕುದು.

(3) ಯಾವುದೇ ಅಂಥ ಕಾಮಗಾರಿಯನ್ನು ಪ್ರಾರಂಭಿಸುವುದಕ್ಕೆ ಮುಂಚೆ ಹದಿನೈದು ದಿವಸಗಳಿಗೆ ಕಡಿಮೆ ಇಲ್ಲದಂತೆ ಮಂಡಲಿಯು ಅಂಥ ಪ್ರತಿಯೊಬ್ಬ ಒಡೆಯನಿಗೆ -

(ಎ) ಉದ್ದೇಶಿತ ಕಾಮಗಾರಿಯ ಸ್ವರೂಪದ ಬಗ್ಗೆ ಬರಹದಲ್ಲಿನ ನೋಟೀಸನ್ನು; ಮತ್ತು

(ಬಿ) ಅದಕ್ಕೆ ಸಂಬಂಧಿಸಿದಂತೆ ವಹಿಸಬೇಕಾಗಿರುವ ವೆಚ್ಚಗಳು ಮತ್ತು ಅವನು ಸಂದಾಯ ಮಾಡಬೇಕಾದ ಅಂಥ ವೆಚ್ಚಗಳ ಪ್ರಮಾಣದ ಅಂದಾಜನ್ನು

- ಕೊಡತಕ್ಕುದು.

(4) ಮಂಡಳಿಯು ಆವರಣಗಳ ಅಂಥ ಗುಂಪು ಅಥವಾ ಬ್ಲಾಕಿನ ಒಡೆಯರನ್ನು ಈ ಪ್ರಕರಣದ ಮೇರೆಗೆ ಕಾರ್ಯಗತಗೊಳಿಸಿದ ಕಾಮಗಾರಿಯನ್ನು ಇಟ್ಟುಕೊಂಡು ಬರಲು ಅಗತ್ಯಪಡಿಸಬಹುದು.

**70. ಕೆಲವು ಸಂದರ್ಭಗಳಲ್ಲಿ ಖಾಸಗಿ ಚರಂಡಿಗಳನ್ನು ಮುಚ್ಚಲು ಅಥವಾ ಅವುಗಳ ಉಪಯೋಗವನ್ನು ಸೀಮಿತಗೊಳಿಸಲು ಮಂಡಳಿಯ ಅಧಿಕಾರ:-** ಮಂಡಳಿಯ ಗ್ರಾಮಸಾರ ಚರಂಡಿಯೊಂದಿಗೆ ಯಾವುದೇ ಆವರಣವನ್ನು ಸಂಪರ್ಕಿಸುವ ಚರಂಡಿಯು ಅಂಥ ಆವರಣದ ಪರಿಣಾಮಕಾರಿ ಚರಂಡಿ ವ್ಯವಸ್ಥೆಗೆ ಸಾಕಷ್ಟಾಗಿರುವಲ್ಲಿ ಮತ್ತು ಅನ್ಯಥಾ ಆಕ್ಷೇಪಣೆ ಇಲ್ಲದೆ ಇರುವಲ್ಲಿ, ಆದರೆ ಮಂಡಳಿಯ ಅಭಿಪ್ರಾಯದಲ್ಲಿ ಬೆಂಗಳೂರು ಮಹಾನಗರ ಪ್ರದೇಶದಲ್ಲಿನ ಸಾಮಾನ್ಯ ಗ್ರಾಮಸಾರ ಚರಂಡಿ ವ್ಯವಸ್ಥೆಗೆ ಅದನ್ನು ಅಳವಡಿಸಿಲ್ಲದೆ ಇರುವಲ್ಲಿ, ಅದು ಆವರಣದ ಒಡೆಯನಿಗೆ ಸಂಬೋಧಿಸಿ ಬರಹದಲ್ಲಿನ ನೋಟೀಸಿನ ಮೂಲಕ,-

(ಎ) ಅಂಥ ಚರಂಡಿಯನ್ನು ಮುಚ್ಚತಕ್ಕುದು, ಮುಂದುವರೆಸತಕ್ಕುದಲ್ಲ ಅಥವಾ ನಾಶಪಡಿಸತಕ್ಕುದು ಮತ್ತು ಆ ಉದ್ದೇಶಕ್ಕಾಗಿ ಅವಶ್ಯವಾದ ಯಾವುದೇ ಕಾರ್ಯವನ್ನು ಮಾಡತಕ್ಕುದೆಂದು; ಅಥವಾ

(ಬಿ) ಅಂಥ ಚರಂಡಿಯನ್ನು, ಈ ಬಗ್ಗೆ ಆ ನೋಟೀಸಿನಲ್ಲಿ ನಿರ್ದಿಷ್ಟ ಪಡಿಸಬಹುದಾದಂಥ ದಿನಾಂಕದಿಂದ, ಹೊಲಸು ಮತ್ತು ಕಲುಷಿತ ನೀರಿಗಾಗಿ ಮಾತ್ರ ಅಥವಾ ಮಳೆ ನೀರು ಮತ್ತು ಕಲುಷಿತಗೊಳ್ಳದ ಅಂತರ್ಜಲಕ್ಕಾಗಿ ಉಪಯೋಗಿಸತಕ್ಕುದೆಂದು

- ನಿರ್ದೇಶಿಸಬಹುದು:

ಪರಂತು,-

(i) (ಎ)ಖಂಡದ ಮೇರೆಗೆ ಮಂಡಳಿಯು ಯಾವುದೇ ಚರಂಡಿಯನ್ನು ಆವರಣದ ಚರಂಡಿ ವ್ಯವಸ್ಥೆಗಾಗಿ ಸರಿಸಮನಾಗಿ ಪರಿಣಾಮಕಾರಿಯಾಗಿರುವ ಇನ್ನೊಂದು ಚರಂಡಿಯನ್ನು ಮತ್ತು ಅದು ಸೂಕ್ತವೆಂದು ಯೋಚಿಸುವಂಥ ಮಂಡಳಿಯ ಯಾವುದೇ ಗ್ರಾಮಸಾರ ಚರಂಡಿಯೊಂದಿಗೆ ಸಂಪರ್ಕವನ್ನು ಹೊಂದುವ ಷರತ್ತಿನ ಮೇಲಲ್ಲದೆ ಮುಚ್ಚತಕ್ಕುದಲ್ಲ, ಮುಂದುವರೆಸತಕ್ಕುದಲ್ಲ ಅಥವಾ ನಾಶಪಡಿಸತಕ್ಕುದಲ್ಲ; ಮತ್ತು

(ii) ಮಂಡಲಿಯು ಹಾಗೆ ಒದಗಿಸಿದ ಯಾವುದೇ ಚರಂಡಿಯ ನಿರ್ಮಾಣದ ಮತ್ತು (ಕ) ಖಂಡದ ಮೇರೆಗೆ ಮಾಡಿದ ಯಾವುದೇ ಕಾಮಗಾರಿಯ ವೆಚ್ಚಗಳನ್ನು ಮಂಡಲಿಯು ಭರಿಸತಕ್ಕುದು.

**71. ಒಡೆಯನನ್ನು ಹೊರತುಪಡಿಸಿ ಯಾವನೇ ಇತರ ವ್ಯಕ್ತಿಯಿಂದ ಚರಂಡಿಯ ಉಪಯೋಗ:-** (1) ಮಂಡಳಿಯು, ಯಾವುದೇ ಆವರಣದ ಒಡೆಯನಿಂದ ಅರ್ಜಿಯನ್ನು ಸ್ವೀಕರಿಸಿದ ಮೇಲಾಗಲೀ ಅಥವಾ ಅನ್ಯಥಾ ಆಗಲಿ ಮಂಡಲಿಯ ಗ್ರಾಮಸಾರ ಚರಂಡಿಯೊಳಕ್ಕೆ ಆವರಣದ ಪರಿಣಾಮಕಾರಿ ಚರಂಡಿ ವ್ಯವಸ್ಥೆಯ ಸಾಧನವು ಇನ್ನೊಬ್ಬ ವ್ಯಕ್ತಿಗೆ ಸೇರಿದ ಚರಂಡಿಯ ಮೂಲಕ ಆಗಿರುವುದು ಏಕಮೇವ ಅಥವಾ ಅತ್ಯಂತ ಅನುಕೂಲಕರವಾದದ್ದೆಂದು ಮಂಡಳಿಯು ಅಭಿಪ್ರಾಯಪಡುವಲ್ಲಿ, ಮಂಡಳಿಯು, ಬರಹದಲ್ಲಿನ ನೋಟೀಸಿನ ಮೂಲಕ ಅಂಥ ಚರಂಡಿಯ ಒಡೆಯನನ್ನು ನೋಟೀಸಿನಲ್ಲಿ ನಿರ್ದಿಷ್ಟಪಡಿಸಿದ ಅವಧಿಯೊಳಗೆ, ಈ ಪ್ರಕರಣದ ಮೇರೆಗೆ ಆದೇಶವನ್ನು ಏಕೆ ಮಾಡಬಾರದು ಎಂಬ ಬಗ್ಗೆ ಕಾರಣವನ್ನು ತೋರಿಸಲು ಅಗತ್ಯಪಡಿಸಬಹುದು.

(2) ನಿರ್ದಿಷ್ಟಪಡಿಸಿದ ಅವಧಿಯೊಳಗೆ ಯಾವುದೇ ಕಾರಣವನ್ನು ತೋರಿಸದೆ ಇರುವಲ್ಲಿ ಅಥವಾ ತೋರಿಸಿದ ಕಾರಣವು ಅಸಿಂಧುವೆಂದು ಅಥವಾ ಸಾಕಷ್ಟಿಲ್ಲವೆಂದು ಮಂಡಲಿಗೆ ಕಂಡುಬಂದಲ್ಲಿ, ಮಂಡಲಿಯು ಬರಹದಲ್ಲಿನ ಆದೇಶದ ಮೂಲಕ ಆವರಣದ ಒಡೆಯನನ್ನು ಆ ಚರಂಡಿಯನ್ನು ಉಪಯೋಗಿಸಲು ಅಧಿಕೃತಗೊಳಿಸಬಹುದು ಅಥವಾ ಅವನನ್ನು ಅದರ ಜಂಟಿ ಒಡೆಯನೆಂದು ಘೋಷಿಸಬಹುದು.

(3) (2)ನೇ ಉಪಪ್ರಕರಣದ ಮೇರೆಗೆ ಮಾಡಿದ ಆದೇಶವು,-

(ಎ) ಆವರಣದ ಒಡೆಯನಿಂದ ಬಾಡಿಗೆಯ ಅಥವಾ ನಷ್ಟಪರಿಹಾರದ ಸಂದಾಯ;

(ಬಿ) ಹಿಂದೆ ಹೇಳಿದ ಚರಂಡಿಯೊಂದಿಗೆ ಅದನ್ನು ಕೂಡಿಸುವ ಉದ್ದೇಶಕ್ಕಾಗಿ ಆವರಣಕ್ಕಾಗಿನ ಚರಂಡಿಯ ನಿರ್ಮಾಣ;

(ಸಿ) ಹಿಂದೆ ಹೇಳಿದ ಚರಂಡಿಯು ಇರುವಂಥ ಭೂಮಿಯ ಮೇಲೆ ಎಲ್ಲ ಯುಕ್ತ ವೇಳೆಗಳಲ್ಲಿ ಸಹಾಯಕರು ಮತ್ತು ಕೆಲಸಗಾರರೊಂದಿಗೆ ಪ್ರವೇಶ;

(ಡಿ) ಹಿಂದೆ ಹೇಳಿದ ಚರಂಡಿಯನ್ನು ಇಟ್ಟುಕೊಂಡು ಬರಲು, ದುರಸ್ತಿ ಮಾಡಲು, ನೀರು ಹಾಯಿಸಲು, ಸ್ವಚ್ಛಗೊಳಿಸಲು ಮತ್ತು ಹರಿಸಲು ಪಕ್ಷಕಾರರ ಅನುಕ್ರಮ ಜವಾಬ್ದಾರಿಗಳು

- ಇವುಗಳ ಬಗ್ಗೆ ನಿರ್ದೇಶನವನ್ನು ಒಳಗೊಳ್ಳಬಹುದು.

**72. ಗ್ರಾಮಸಾರ ಚರಂಡಿ ವ್ಯವಸ್ಥೆ ಮತ್ತು ಮಳೆಯ ನೀರಿನ ಚರಂಡಿಗಳು ವಿಭಿನ್ನವಾಗಿರತಕ್ಕುದು:-** (1) ಯಾವುದೇ ಆವರಣದ ಪರಿಣಾಮಕಾರಿ ಚರಂಡಿ ವ್ಯವಸ್ಥೆಗಾಗಿನ ಕ್ರಮಗಳನ್ನು ಕೈಗೊಳ್ಳತಕ್ಕುದು ಅಥವಾ ಕೈಗೊಳ್ಳಬಹುದು ಎಂದು ಈ ಅಧ್ಯಾಯದಲ್ಲಿ ಉಪಬಂಧಿಸಿರುವಾಗಲೆಲ್ಲಾ, ಮಂಡಳಿಯ ಪ್ರತ್ಯೇಕ ಗ್ರಾಮಸಾರ ಚರಂಡಿ ಅಥವಾ ನಿಗಮ ಚರಂಡಿ ಅಥವಾ ಇತರ ಸೂಕ್ತ ಸ್ಥಳಗಳಿಗೆ ಪ್ರತಿಯೊಂದು ಹರಿದುಹೋಗುವ ಹೊಲಸು ಮತ್ತು ಕಲುಷಿತವಾದ ನೀರಿಗೆ ಒಂದು ಚರಂಡಿ ಮತ್ತು ಮಳೆ ನೀರು ಮತ್ತು ಕಲುಷಿತವಲ್ಲದ ಅಂತರ್ಜಲಕ್ಕಾಗಿನ ಅಥವಾ ಮಳೆಯ ನೀರು ಮತ್ತು ಕಲುಷಿತವಲ್ಲದ ಅಂತರ್ಜಲ ಇವೆರಡಕ್ಕೂ ಪೂರ್ಣವಾಗಿ ವಿಭಿನ್ನವಾದ ಒಂದು ಚರಂಡಿ ಇರತಕ್ಕುದು ಎಂದು ಅಗತ್ಯಪಡಿಸುವುದು ಮಂಡಳಿಗೆ ಸಕ್ಷಮವಾಗಿರತಕ್ಕುದು.

**73. ತೃಪ್ತಿಕರವಾದ ಚರಂಡಿ ವ್ಯವಸ್ಥೆಗಾಗಿ ಕೆಲವು ಕಾಮಗಾರಿಗಳನ್ನು ಕಾರ್ಯಗತಗೊಳಿಸಲು ಒಡೆಯನನ್ನು ಅಗತ್ಯಪಡಿಸುವ ಅಧಿಕಾರ:-** ಯಾವುದೇ ಆವರಣದ ಸಾಕಷ್ಟು ಚರಂಡಿ ವ್ಯವಸ್ಥೆಯ ಉದ್ದೇಶಕ್ಕಾಗಿ, ಮಂಡಳಿಯು, ಬರಹದಲ್ಲಿನ ನೋಟೀಸಿನ ಮೂಲಕ,-

(ಎ) ಎರಡು ಅಥವಾ ಅದಕ್ಕಿಂತ ಹೆಚ್ಚು ಕಟ್ಟಡಗಳ ನಡುವಣ ಯಾವುದೇ ಅಂಗಳ, ಸಂದಿ ಅಥವಾ ದಾರಿಯನ್ನು ಅಂಥ ಕಟ್ಟಡಗಳ ಒಡೆಯ ಅಥವಾ ಒಡೆಯರು ಮಂಡಳಿಯು ಅನುಮೋದಿಸಬಹುದಾದಂಥ ಸಾಮಗ್ರಿಗಳು ಮತ್ತು ಅಂಥ ರೀತಿಯಲ್ಲಿ ನೆಲಗಟ್ಟು ಮಾಡುವಂತೆ ಅಗತ್ಯಪಡಿಸಬಹುದು; ಮತ್ತು

(ಬಿ) ಅಂಥ ನೆಲಗಟ್ಟನ್ನು ಸರಿಯಾದ ದುರಸ್ತಿಯಲ್ಲಿಡಲು ಅಗತ್ಯಪಡಿಸಬಹುದು.

**74. ಗ್ರಾಮಸಾರ ಚರಂಡಿಗಳನ್ನು ಹರಿಸಲು ಮತ್ತು ಗ್ರಾಮಸಾರದ ವಿಲೆಗಾಗಿ ಸ್ಥಳಗಳನ್ನು ಗೊತ್ತುಪಡಿಸುವುದು:-** ಮಂಡಳಿಯು, ಅದು ಸೂಕ್ತವೆಂದು ಪರ್ಯಾಲೋಚಿಸುವಂಥ ಸ್ಥಳ ಅಥವಾ ಸ್ಥಳಗಳೊಳಕ್ಕೆ ಮಂಡಳಿಯ ಯಾವುದೇ ಅಥವಾ ಎಲ್ಲಾ ಗ್ರಾಮಸಾರ ಚರಂಡಿಗಳು ಹರಿದುಹೋಗುವಂತೆ ಮತ್ತು ಅಲ್ಲಿ ಎಲ್ಲಾ ಗ್ರಾಮಸಾರವನ್ನು ವಿಲೆಮಾಡುವಂತೆ ಮಾಡಬಹುದು:

ಪರಂತು, ಈ ಅಧ್ಯಾಯವು ಜಾರಿಗೆ ಬರುವುದಕ್ಕೆ ಮುಂಚೆ ಈ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಯಾವುದೇ ಉದ್ದೇಶಕ್ಕಾಗಿ ಉಪಯೋಗಿಸಲಾಗಿಲ್ಲದಂಥ ಯಾವುದೇ ಸ್ಥಳವನ್ನು, ಹಾಗೆ ಜಾರಿಗೆ ಬಂದ ತರುವಾಯ ಮಂಡಳಿಯ ಅನುಮೋದನೆಯಿಲ್ಲದೆ ಅದಕ್ಕಾಗಿ ಉಪಯೋಗಿಸತಕ್ಕುದಲ್ಲ:

ಮತ್ತೂ ಪರಂತು, ಈ ಬಗ್ಗೆ ಮಂಡಳಿಯು ಗೊತ್ತುಪಡಿಸಬಹುದಾದಂಥ ದಿನಾಂಕದಂದು ಮತ್ತು ಆ ತರುವಾಯ ಯಾವುದೇ ಗ್ರಾಮಸಾರ ಚರಂಡಿಯನ್ನು ಯಾವುದೇ ಜಲಮಾರ್ಗದೊಳಕ್ಕೆ [1][ಈ ಬಗ್ಗೆ ರಚಿಸಿದ ಉಪವಿಧಿಗಳಲ್ಲಿ ನಿಯಮಿಸಬಹುದಾದಂಥ ರೀತಿಯಲ್ಲಿ][1] ಅದನ್ನು ಹರಿಯಬಿಡತಕ್ಕುದಲ್ಲ.

**75. ಅನುಮತಿಯಿಲ್ಲದೆ ಗ್ರಾಮಸಾರ ಚರಂಡಿಗಳೊಂದಿಗೆ ಕೂಡಿಸತಕ್ಕುದಲ್ಲ:-** ಮಂಡಳಿಯ ಬರಹದಲ್ಲಿ ಅನುಮತಿಯಿಲ್ಲದೆ, ಯಾವನೇ ವ್ಯಕ್ತಿಯು, ಯಾವುದೇ ಆದ ಉದ್ದೇಶಕ್ಕಾಗಿ, ಯಾವುದೇ ಕಾಲದಲ್ಲಿ 63ನೇ ಪ್ರಕರಣದಲ್ಲಿ ಉಲ್ಲೇಖಿಸಿದ, ಮಂಡಲಿಯು ನಿರ್ಮಿಸಿದ ಅಥವಾ ಅದು ಇಟ್ಟುಕೊಂಡು ಬಂದಿರುವ ಅಥವಾ ಅದರಲ್ಲಿ ನಿಹಿತವಾಗಿರುವ ಯಾವುದೇ ಗ್ರಾಮಸಾರ ಚರಂಡಿಯೊಂದಿಗೆ ಯಾವುದೇ ಕೂಡಿಸುವಿಕೆ ಅಥವಾ ಸಂಪರ್ಕವನ್ನು ಮಾಡತಕ್ಕುದಲ್ಲ ಅಥವಾ ಮಾಡಗೊಡತಕ್ಕುದಲ್ಲ.

**76. ಅನುಮತಿಯಿಲ್ಲದೆ ಗ್ರಾಮಸಾರ ಚರಂಡಿಗಳ ಮೇಲೆ ಕಟ್ಟಡಗಳು ಮತ್ತು ಖಾಸಗಿ ಬೀದಿಗಳನ್ನು ಕಟ್ಟತಕ್ಕುದಲ್ಲ ಅಥವಾ ನಿರ್ಮಿಸತಕ್ಕುದಲ್ಲ:-** (1) ಮಂಡಳಿಯ ಬರಹದಲ್ಲಿನ ಅನುಮತಿಯಿಲ್ಲದೆ ಮಂಡಳಿಯು ನಿರ್ಮಿಸಿದ ಅಥವಾ ಇಟ್ಟುಕೊಂಡು ಬಂದಿರುವ ಅಥವಾ ಅದರಲ್ಲಿ ನಿಹಿತವಾದ ಮಂಡಳಿಯ ಯಾವುದೇ ಗ್ರಾಮಸಾರ ಚರಂಡಿಯ ಮೇಲೆ ಯಾವುದೇ ಖಾಸಗಿ ಬೀದಿಯನ್ನು ನಿರ್ಮಿಸತಕ್ಕುದಲ್ಲ ಮತ್ತು ಯಾವುದೇ ಕಟ್ಟಡ, ಗೋಡೆ, ಬೇಲಿ ಅಥವಾ ಇತರ ರಚನೆಯನ್ನು ಕಟ್ಟತಕ್ಕುದಲ್ಲ.

(2) ಮಂಡಳಿಯ ಬರಹದಲ್ಲಿನ ಅನುಮತಿಯಿಲ್ಲದ ಹಿಂದೆ ಹೇಳಿದಂತೆ ಯಾವುದೇ ಗ್ರಾಮಸಾರ ಚರಂಡಿಯ ಮೇಲೆ ಯಾವುದೇ ಖಾಸಗಿ ಬೀದಿಯನ್ನು ನಿರ್ಮಿಸಿದರೆ ಅಥವಾ ಯಾವುದೇ ಕಟ್ಟಡ, ಗೋಡೆ, ಬೇಲಿ ಅಥವಾ ರಚನೆಯನ್ನು ಕಟ್ಟಿದರೆ, ಮಂಡಳಿಯು ಅದನ್ನು ತೆಗೆದುಹಾಕಬಹುದು ಅಥವಾ ಅದರ ಬಗ್ಗೆ ಅದು ಸೂಕ್ತವೆಂದು ಯೋಚಿಸುವಂತೆ ಅನ್ಯಥಾ ವ್ಯವಹರಿಸಬಹುದು.

(3) ಹಾಗೆ ಮಾಡುವಲ್ಲಿ ಮಂಡಳಿಯು ವಹಿಸಿದ ವೆಚ್ಚಗಳನ್ನು ಖಾಸಗಿ ಬೀದಿ ಅಥವಾ ಕಟ್ಟಡ, ಬೇಲಿ, ಗೋಡೆ ಅಥವಾ ಇತರ ರಚನೆಯ ಒಡೆಯನು, ಅಥವಾ ಸಂದರ್ಭಾನುಸಾರ ತಪ್ಪುಮಾಡುವ ವ್ಯಕ್ತಿಯು ಸಂದಾಯಮಾಡತಕ್ಕುದು ಮತ್ತು ಅವುಗಳನ್ನು ಈ ಅಧಿನಿಯಮದ ಮೇರೆಗೆ ಸಂದಾಯ ಮಾಡಬೇಕಾದ ಚಾರ್ಜುಗಳ ಬಾಕಿಯಂತೆ ವಸೂಲು ಮಾಡತಕ್ಕುದು.

**77. ಗ್ರಾಮಸಾರ ಚರಂಡಿಗಳಿಗಾಗಿ ಸ್ವತ್ತಿನ ಉಪಯೋಗದ ಬಗ್ಗೆ ಹಕ್ಕುಗಳು:-** (1) ಮಂಡಳಿಯು ಬೆಂಗಳೂರು ಮಹಾನಗರ ಪ್ರದೇಶದ ಸ್ಥಳೀಯ ಪರಿಮಿತಿಗಳ ಒಳಗೆಯೇ ಆಗಲಿ ಅಥವಾ ಹೊರಗಡೆಯೇ ಆಗಲಿ ಯಾವುದೇ ಸ್ಥಿರಾಸ್ತಿಯನ್ನು ಆರ್ಜಿಸದೆ ಅದರ ಮೇಲೆ, ಕೆಳಗೆ, ಅದರ ಗುಂಟ ಅಥವಾ ಅದಕ್ಕೆ ಅಡ್ಡಲಾಗಿ ಗ್ರಾಮಸಾರ ಚರಂಡಿಗಳನ್ನು ನೆಲೆಗೊಳಿಸಬಹುದು ಮತ್ತು ಇಟ್ಟುಕೊಂಡು ಬರಬಹುದು, ಮತ್ತು ಯಾವುದೇ ಕಾಲದಲ್ಲಿ ಯಾವುದೇ ಗ್ರಾಮಸಾರ ಚರಂಡಿಗಳನ್ನು ಪರೀಕ್ಷಿಸುವ, ದುರಸ್ತಿಮಾಡುವ, ಬದಲಾಯಿಸುವ ಅಥವಾ ತೆಗೆದುಹಾಕುವ ಉದ್ದೇಶಕ್ಕಾಗಿ ಯಾವ ಸ್ವತ್ತಿನ ಮೇಲೆ, ಕೆಳಗೆ, ಅದರ ಗುಂಟ ಅಥವಾ ಅದಕ್ಕೆ ಅಡ್ಡವಾಗಿ ಗ್ರಾಮಸಾರ ಚರಂಡಿಗಳನ್ನು ಹಾಕಲಾಗಿದೆಯೋ ಆ ಯಾವುದೇ ಸ್ವತ್ತಿನ ಮೇಲೆ ಪ್ರವೇಶಿಸಬಹುದು:

ಪರಂತು, ಮಂಡಳಿಯು, ಯಾವ ಸ್ವತ್ತಿನ ಮೇಲೆ, ಕೆಳಗೆ, ಅದರ ಗುಂಟ ಅಥವಾ ಅದಕ್ಕೆ ಅಡ್ಡಲಾಗಿ ಯಾವುದೇ ಗ್ರಾಮಸಾರ ಚರಂಡಿಯನ್ನು ಹಾಕಲಾಗಿದೆಯೋ ಆ ಸ್ವತ್ತಿನಲ್ಲಿ ಸತತ ಉಪಯೋಗದ ಹಕ್ಕನ್ನು ಹೊರತುಪಡಿಸಿ ಯಾವುದೇ ಇತರ ಹಕ್ಕನ್ನು ಆರ್ಜಿಸತಕ್ಕುದಲ್ಲ.

(2) ಈ ಪ್ರಕರಣದ ಮೂಲಕ ಅದಕ್ಕೆ ಪ್ರಧಾನ ಮಾಡಿದ ಅಧಿಕಾರಗಳನ್ನು ಚಲಾಯಿಸುವಲ್ಲಿ, ಮಂಡಳಿಯು ಸಾಧ್ಯವಾಗಬಹುದಾದಷ್ಟು ಕಡಿಮೆ ಹಾನಿಯನ್ನುಂಟು ಮಾಡತಕ್ಕುದು ಮತ್ತು ಅದು ಮಾಡಿದ ಯಾವುದೇ ಹಾನಿಗಾಗಿ ಪೂರ್ಣ ನಷ್ಟ ಪರಿಹಾರವನ್ನು ಅದು ಕೊಡತಕ್ಕುದು.

**78. ಇತರ ವ್ಯಕ್ತಿಗಳಿಗೆ ಸೇರಿದ ಭೂಮಿಯ ಮೂಲಕ ಗ್ರಾಮಸಾರ ಚರಂಡಿಯನ್ನು ಹಾಕಲು ಆವರಣದ ಒಡೆಯನ ಅಧಿಕಾರ:-** (1) ಮಂಡಳಿಗೆ ಇನ್ನೊಬ್ಬ ವ್ಯಕ್ತಿಯ ಸ್ಥಿರಸ್ವತ್ತಿನ ಮೇಲೆ, ಕೆಳಗೆ, ಅದರ ಗುಂಟ ಅಥವಾ ಅದಕ್ಕೆ ಅಡ್ಡಲಾಗಿ ಯಾವುದೇ ಗ್ರಾಮಸಾರ ಚರಂಡಿಯನ್ನು ಹಾಕುವುದರ ಮೂಲಕ ಯಾವುದೇ ಆವರಣದ ಗ್ರಾಮಸಾರ ಚರಂಡಿಯನ್ನು ವ್ಯವಸ್ಥೆಗೊಳಿಸುವುದು ಏಕಮಾತ್ರ ಅಥವಾ ಹೆಚ್ಚು ಅನುಕೂಲಕರ ಸಾಧನವಾಗಿರುವುದಾಗಿ ಕಂಡುಬಂದರೆ, ಮಂಡಳಿಯು, ಬರಹದಲ್ಲಿನ ಆದೇಶದ ಮೂಲಕ ಅಂಥ ಸ್ಥಿರ ಸ್ವತ್ತಿನ ಮೇಲೆ, ಕೆಳಗೆ, ಅದರ ಗುಂಟ ಅಥವಾ ಅದಕ್ಕೆ ಅಡ್ಡಲಾಗಿ ಅಂಥ ಗ್ರಾಮಸಾರ ಚರಂಡಿಯನ್ನು ಹಾಕಲು ಅಥವಾ ಒಯ್ಯಲು ಆವರಣದ ಒಡೆಯನನ್ನು ಅಧಿಕೃತಗೊಳಿಸಬಹುದು:

1. 1966ರ ಅಧಿನಿಯಮ ಸಂಖ್ಯೆ 6ರ ಮೂಲಕ 17.3.1966 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

ಪರಂತು, ಅಂಥ ಯಾವುದೇ ಆದೇಶವನ್ನು ಮಾಡುವುದಕ್ಕೆ ಮುಂಚೆ ಮಂಡಳಿಯು, ಆ ಸ್ಥಿರ ಸ್ವತ್ತಿನ ಒಡೆಯನಿಗೆ ಆ ಆದೇಶವನ್ನು ಏಕೆ ಮಾಡಬಾರದು ಎಂಬ ಬಗ್ಗೆ, ರಚಿಸಿದ ವಿನಿಯಮಗಳ ಮೂಲಕ ನಿಯಮಿಸಬಹುದಾದಂಥ ಕಾಲದೊಳಗೆ ಕಾರಣ ತೋರಿಸಲು ಯುಕ್ತ ಅವಕಾಶವನ್ನು ಕೊಡತಕ್ಕುದು:

ಮತ್ತೂ ಪರಂತು, ಆವರಣದ ಒಡೆಯನು ಯಾವ ಸ್ವತ್ತಿನ ಮೇಲೆ, ಕೆಳಗೆ, ಅದರ ಗುಂಟ ಮತ್ತು ಅದಕ್ಕೆ ಅಡ್ಡಲಾಗಿ ಅಂಥ ಗ್ರಾಮಸಾರ ಚರಂಡಿಯನ್ನು ಹಾಕಲಾಗಿದೆಯೋ ಅಂಥ ಸ್ವತ್ತಿನಲ್ಲಿ ಸತತ ಉಪಯೋಗದ ಹಕ್ಕನ್ನು ಹೊರತುಪಡಿಸಿ ಯಾವುದೇ ಇತರ ಹಕ್ಕನ್ನು ಆರ್ಜಿಸತಕ್ಕುದಲ್ಲ.

(2) (1)ನೇ ಉಪಪ್ರಕರಣದ ಮೇರೆಗೆ ಆದೇಶವನ್ನು ಮಾಡಿದ ಮೇಲೆ, ಆವರಣದ ಒಡೆಯನು ಹಾಗೆ ಮಾಡುವ ಅವನ ಉದ್ದೇಶದ ಬಗ್ಗೆ ಯುಕ್ತ ನೋಟೀಸನ್ನು ಕೊಟ್ಟ ತರುವಾಯ, ಅಂಥ ಸ್ಥಿರ ಸ್ವತ್ತಿನ ಮೇಲೆ, ಕೆಳಗೆ, ಅದರ ಗುಂಟ ಅಥವಾ ಅದಕ್ಕೆ ಅಡ್ಡಲಾಗಿ ಗ್ರಾಮಸಾರ ಚರಂಡಿಯನ್ನು ಹಾಕುವ ಉದ್ದೇಶಕ್ಕಾಗಿ ಅಥವಾ ಅದನ್ನು ದುರಸ್ತಿ ಮಾಡುವ ಉದ್ದೇಶಕ್ಕಾಗಿ ಸೂರ್ಯೋದಯ ಮತ್ತು ಸೂರ್ಯಾಸ್ತದ ನಡುವಿನ ಯಾವುದೇ ಕಾಲದಲ್ಲಿ ಸಹಾಯಕರು ಮತ್ತು ಕೆಲಸಗಾರರೊಂದಿಗೆ ಆ ಸ್ಥಿರ ಸ್ವತ್ತಿನ ಮೇಲೆ ಪ್ರವೇಶಿಸಬಹುದು.

(3) ಈ ಪ್ರಕರಣದ ಮೇರೆಗೆ ಚರಂಡಿಯನ್ನು ಹಾಕುವಲ್ಲಿ ಆ ಸ್ಥಿರ ಸ್ವತ್ತಿಗೆ ಸಾಧ್ಯವಾದಷ್ಟು ಕಡಿಮೆ ಹಾನಿಯನ್ನು ಮಾಡತಕ್ಕುದು ಮತ್ತು ಆವರಣದ ಒಡೆಯನು,-

(ಎ) ಕಾರ್ಯ ಸಾಧ್ಯವಾಗಬಹುದಾದಷ್ಟು ಕಡಿಮೆ ವಿಳಂಬದಲ್ಲಿ ಗ್ರಾಮಸಾರ ಚರಂಡಿಯನ್ನು ಹಾಕುವಂತೆ ಮಾಡತಕ್ಕುದು;

(ಬಿ) ಅಂಥ ಗ್ರಾಮಸಾರ ಚರಂಡಿಯನ್ನು ಹಾಕುವ ಉದ್ದೇಶಕ್ಕಾಗಿ ತೆರೆದ, ಅಗೆದ ಅಥವಾ ತೆಗೆದು ಹಾಕಿದ ಯಾವುದೇ ಭೂಮಿಯನ್ನು ಅವನ ಸ್ವಂತ ಖರ್ಚಿನಲ್ಲಿ ಮತ್ತು ಕಾರ್ಯ ಸಾಧ್ಯವಾಗಬಹುದಾದಷ್ಟು ಕಡಿಮೆ ವಿಳಂಬದಲ್ಲಿ ಭರ್ತಿಮಾಡತಕ್ಕುದು, ಪುನಃ ಸ್ಥಾಪಿಸತಕ್ಕುದು ಮತ್ತು ಸರಿಮಾಡತಕ್ಕುದು; ಮತ್ತು

(ಸಿ) ಅಂಥ ಗ್ರಾಮಸಾರ ಚರಂಡಿಯನ್ನು ಹಾಕುವ ಕಾರಣದಿಂದಾಗಿ ಹಾನಿಯನ್ನು ಅನುಭವಿಸುವ ಆ ಸ್ಥಿರ ಸ್ವತ್ತಿನ ಒಡೆಯ ಅಥವಾ ಯಾವನೇ ಇತರ ವ್ಯಕ್ತಿಗೆ ನಷ್ಟ ಪರಿಹಾರವನ್ನು ಸಂದಾಯಮಾಡತಕ್ಕುದು.

(4) ಯಾವ ಸ್ಥಿರ ಸ್ವತ್ತಿನ ಮೇಲೆ, ಕೆಳಗೆ, ಅದರ ಗುಂಟ ಅಥವಾ ಅದಕ್ಕೆ ಅಡ್ಡಲಾಗಿ ಗ್ರಾಮಸಾರ ಚರಂಡಿಯನ್ನು ಈ ಪ್ರಕರಣದ ಮೇರೆಗೆ ಹಾಕಲಾಗಿದೆಯೋ ಆ ಸ್ಥಿರ ಸ್ವತ್ತಿನ ಒಡೆಯನು ಅಂಥ ಸ್ಥಿರ ಸ್ವತ್ತಿನ ಮೇಲೆ ಕಟ್ಟಡವನ್ನು ಕಟ್ಟಿಲ್ಲದೇ ಇರುವಾಗ ಅಂಥ ಸ್ವತ್ತಿನ ಮೇಲೆ ಯಾವುದೇ ಕಟ್ಟಡವನ್ನು ಕಟ್ಟಲು ಇಚ್ಛಿಸಿದರೆ ಮಂಡಳಿಯು ಬರಹದಲ್ಲಿನ ನೋಟೀಸಿನ ಮೂಲಕ ಆ ಆವರಣದ ಒಡೆಯನನ್ನು ಅದು ಅನುಮೋದಿಸತಕ್ಕಂಥ ರೀತಿಯಲ್ಲಿ ಗ್ರಾಮಸಾರ ಚರಂಡಿಯನ್ನು ಮುಚ್ಚಲು, ತೆಗೆದುಹಾಕಲು ಅಥವಾ ಮಾರ್ಗಪಲ್ಲಟಗೊಳಿಸಲು ಮತ್ತು ಅದರ ಮೇಲೆ, ಅದರ ಗುಂಟು ಅಥವಾ ಅದಕ್ಕೆ ಅಡ್ಡಲಾಗಿ ಆ ಗ್ರಾಮಸಾರ ಚರಂಡಿಯನ್ನು ಹಾಕಿಲ್ಲದೆ ಇದ್ದಿದ್ದರೆ ಹೇಗೋ ಹಾಗೆ ಆ ಸ್ಥಿರ ಸ್ವತ್ತನ್ನು ಮುಚ್ಚಲು, ಪುನಃ ಸ್ಥಾಪಿಸಲು ಮತ್ತು ಸರಿಮಾಡಲು ಅಗತ್ಯಪಡಿಸತಕ್ಕುದು:

ಪರಂತು, ಯಾವುದೇ ಅಂಥ ಕಡ್ಡಾಯ ಕೋರಿಕೆಯನ್ನು ಮಂಡಳಿಯ ಅಭಿಪ್ರಾಯದಲ್ಲಿ ಆ ಉದ್ದೇಶಿತ ಕಟ್ಟಡವನ್ನು ನಿರ್ಮಿಸುವುದಕ್ಕಾಗಿ ಅಥವಾ ಅದರ ಸುರಕ್ಷಿತ ಅನುಭೋಗಕ್ಕಾಗಿ ಆ ಗ್ರಾಮಸಾರ ಚರಂಡಿಯನ್ನು ಮುಚ್ಚುವುದು, ತೆಗೆದುಹಾಕುವುದು ಅಥವಾ ಮಾರ್ಗಪಲ್ಲಟಗೊಳಿಸುವುದು ಅವಶ್ಯ ಅಥವಾ ವಿಹಿತವಾಗಿದ್ದ ಹೊರತು, ಮಾಡತಕ್ಕುದಲ್ಲ.

**79. ಹೊಣೆಗಾರನಾದ ವ್ಯಕ್ತಿಗೆ ನೋಟೀಸನ್ನು ಕೊಟ್ಟ ತರುವಾಯ ಕಾಮಗಾರಿಯನ್ನು ನಿರ್ವಹಿಸಲು ಅಧಿಕಾರ:-** (1) ಈ ಅಧ್ಯಾಯದ ಉಪಬಂಧಗಳ ಮೇರೆಗೆ ಯಾವುದೇ ಕಾಮಗಾರಿಯನ್ನು ನಿರ್ವಹಿಸಲು ಯಾವನೇ ವ್ಯಕ್ತಿಯನ್ನು ಅಗತ್ಯಪಡಿಸಬಹುದಾದಾಗ ಅಥವಾ ಅವನು ಹೊಣೆಗಾರನಾಗಿರುವಾಗ, ಮಂಡಳಿಯು, ಈ ಅಧಿನಿಯಮದ ಮತ್ತು ಈ ಬಗ್ಗೆ ರಚಿಸಿದ ಯಾವುದೇ ವಿನಿಯಮಗಳ ಉಪಬಂಧಗಳಿಗೆ ಅನುಸಾರವಾಗಿ, ಈ ಉದ್ದೇಶಕ್ಕಾಗಿ ಅದು ನಿರ್ದಿಷ್ಟಪಡಿಸಬಹುದಾದಂಥ ಕಾಲದೊಳಗೆ ಅದನ್ನು ನಿರ್ವಹಿಸಲು ಅವಕಾಶವನ್ನು ಅಂಥ ವ್ಯಕ್ತಿಗೆ ಕೊಟ್ಟ ತರುವಾಯ ಅಂಥ ಕಾಮಗಾರಿಯನ್ನು ನಿರ್ವಹಿಸುವಂತೆ ಮಾಡತಕ್ಕುದು.

(2) ಯಾವುದೇ ಅಂಥ ಕಾಮಗಾರಿಯನ್ನು ನಿರ್ವಹಿಸುವಲ್ಲಿ ಮಂಡಲಿಯು ವಹಿಸಿದ ಅಥವಾ ವಹಿಸುವ ಸಂಭವವಿರುವಲ್ಲಿ ವೆಚ್ಚಗಳನ್ನು ಸದರಿ ವ್ಯಕ್ತಿಯು ಸಂದಾಯ ಮಾಡತಕ್ಕುದು ಮತ್ತು ಅಂಥ ಕಾಮಗಾರಿಯನ್ನು ಇಟ್ಟುಕೊಂಡುಬರುವುದಕ್ಕೆ ಸಂಬಂಧಿಸಿದಂತೆ ಮಂಡಳಿಯು ವಹಿಸಿದ ವೆಚ್ಚಗಳನ್ನು ಅಂಥ ಕಾಮಗಾರಿಯಿಂದ ಸಾಧ್ಯಗೊಳಿಸಲಾದಂಥ ಸೌಕರ್ಯಗಳು ಮತ್ತು ಅನುಕೂಲತೆಗಳನ್ನು ಅನುಭೋಗಿಸುವ ವ್ಯಕ್ತಿ ಅಥವಾ ವ್ಯಕ್ತಿಗಳು ಸಂದಾಯಮಾಡತಕ್ಕುದು.

(3) (2)ನೇ ಉಪಪ್ರಕರಣದಲ್ಲಿ ಉಲ್ಲೇಖಿಸಿದ ವೆಚ್ಚವನ್ನು, ಹೊಣೆಗಾರನಾದ ವ್ಯಕ್ತಿ ಅಥವಾ ವ್ಯಕ್ತಿಗಳಿಂದ ಈ ಅಧಿನಿಯಮದ ಮೇರೆಗೆ ಸಂದಾಯ ಮಾಡಬೇಕಾದ ಚಾರ್ಜುಗಳ ಬಾಕಿಯಂತೆ ವಸೂಲುಮಾಡತಕ್ಕುದು.

**80. ಗ್ರಾಮಸಾರ ಚರಂಡಿ ಅಥವಾ ರೊಚ್ಚು ಗುಂಡಿಯ ವಾಯುಸಂಚಾರಕ್ಕೆ ಸುರಂಗ ಮಾರ್ಗಗಳು (ಶಾಫ್ಟ್‌ಗಳು) ಇತ್ಯಾದಿಗಳನ್ನು ಜೋಡಿಸುವ ಅಧಿಕಾರ:-** ಅದು ಮಂಡಳಿಯಲ್ಲಿ ನಿಹಿತವಾಗಿರಲಿ ಅಥವಾ ಇಲ್ಲದಿರಲಿ ಯಾವುದೇ ಗ್ರಾಮಸಾರ ಚರಂಡಿ ಅಥವಾ ರೊಚ್ಚುಗುಂಡಿಗೆ ವಾಯು ಸಂಚಾರವನ್ನು ಒದಗಿಸುವ ಉದ್ದೇಶಕ್ಕಾಗಿ, ಮಂಡಳಿಯು, ಈ ಬಗ್ಗೆ ರಚಿಸಿದ ವಿನಿಯಮಗಳಿಗೆ ಅನುಸಾರವಾಗಿ, ಅದಕ್ಕೆ ಅವಶ್ಯವೆಂದು ಕಂಡುಬರಬಹುದಾದಂಥ ಯಾವುದೇ ಸುರಂಗ ಮಾರ್ಗ ಅಥವಾ ಕೊಳವೆಯನ್ನು ಯಾವುದೇ ಆವರಣದ ಮೇಲೆ ನಿರ್ಮಿಸಬಹುದು ಅಥವಾ ಯಾವುದೇ ಕಟ್ಟಡದ ಹೊರಗಡೆ ಅದನ್ನು ಜೋಡಿಸಬಹುದು.

**81. ದೋಷಯುಕ್ತವಾಗಿರುವುದಾಗಿ ನಂಬಲಾದ ಗ್ರಾಮಸಾರ ಚರಂಡಿಗಳು ಇತ್ಯಾದಿಯನ್ನು ಪರಿಶೀಲಿಸಲು ಮತ್ತು ಪರೀಕ್ಷಿಸಲು ಅಧಿಕಾರ:-** (1) ಮಂಡಳಿಗೆ, ಖಾಸಗಿ ಗ್ರಾಮಸಾರ ಚರಂಡಿ ಅಥವಾ ರೊಚ್ಚುಗುಂಡಿಯು ಆರೋಗ್ಯಕ್ಕೆ ಪ್ರತಿಕೂಲಕರವಾಗಿರುವ ಅಥವಾ ಉಪದ್ರವಕಾರಿಯಾಗಿರುವ ಸ್ಥಿತಿಯಲ್ಲಿದೆ ಎಂದು ಅಥವಾ ಮಂಡಳಿಯ ಗ್ರಾಮಸಾರ ಚರಂಡಿಯೊಂದಿಗೆ ನೇರವಾಗಿ ಅಥವಾ ಪರೋಕ್ಷವಾಗಿ ಸಂಪರ್ಕವನ್ನು ಹೊಂದಿರುವ ಖಾಸಗಿ ಗ್ರಾಮಸಾರ ಚರಂಡಿಯು ಅಂತರ್ಜಲವು ಸೇರಿಕೊಳ್ಳುವ ಹಾಗೆ ದೋಷಪೂರಿತವಾಗಿದೆ ಎಂದು ನಂಬಲು ಯುಕ್ತ ಕಾರಣಗಳಿವೆಯೆಂದು ಕಂಡುಬರುವಲ್ಲಿ ಅದು, ಅದರ ಸ್ಥಿತಿಯನ್ನು ಪರೀಕ್ಷಿಸಬಹುದು ಮತ್ತು ಆ ಉದ್ದೇಶಕ್ಕಾಗಿ ಒತ್ತಡದಲ್ಲಿರುವ ನೀರಿನ ಮೂಲಕ ಪರೀಕ್ಷೆಯನ್ನು ಹೊರತುಪಡಿಸಿ ಯಾವುದೇ ಇತರ ಪರೀಕ್ಷೆಯನ್ನು ಮಾಡಬಹುದು ಮತ್ತು ಅದು ಅವಶ್ಯವೆಂದು ಭಾವಿಸಿದರೆ ಭೂಮಿಯನ್ನು ಅಗೆಯಬಹುದು.

(2) ಪರೀಕ್ಷೆಯನ್ನು ಮಾಡಿದ ಮೇಲೆ ಆ ಗ್ರಾಮಸಾರ ಚರಂಡಿ ಅಥವಾ ರೊಚ್ಚುಗುಂಡಿಯು ಸರಿಯಾದ ಸ್ಥಿತಿಯಲ್ಲಿ ಇರುವುದಾಗಿ ಕಂಡುಬಂದರೆ, ಮಂಡಳಿಯು ಸಾಧ್ಯವಾದಷ್ಟು ಬೇಗನೆ, ಅದು ಅಗೆದ ಭೂಮಿಯನ್ನು ಪುನಃ ಸ್ಥಾಪಿಸತಕ್ಕುದು ಮತ್ತು ಅದು ಮಾಡಿದ ಹಾನಿಯನ್ನು ತುಂಬಿಕೊಡತಕ್ಕುದು.

**82. ಲೈಸೆನ್ಸು ಪಡೆದ ಕೊಳಾಯಿಗಾರನು ಕಾಮಗಾರಿಯನ್ನು ಮಾಡತಕ್ಕುದು:-**(1) ಲೈಸೆನ್ಸು ಪಡೆದ ಕೊಳಾಯಿಗಾರನನ್ನು ಹೊರತುಪಡಿಸಿ, ಯಾವನೇ ಇತರ ವ್ಯಕ್ತಿಯು ಈ ಅಧ್ಯಾಯದಲ್ಲಿ ವಿವರಿಸಿರುವ ಯಾವುದೇ ಕಾಮಗಾರಿಯನ್ನು ನಿರ್ವಹಿಸತಕ್ಕುದಲ್ಲ ಮತ್ತು ಯಾವನೇ ವ್ಯಕ್ತಿಯು ಲೈಸೆನ್ಸ್ ಪಡೆದ ಕೊಳಾಯಿಗಾರನನ್ನು ಹೊರತುಪಡಿಸಿ ಅಂಥ ಯಾವುದೇ ಕಾಮಗಾರಿಯನ್ನು ನಿರ್ವಹಿಸಲು ಅನುಮತಿಸತಕ್ಕುದಲ್ಲ:

ಪರಂತು, ಸ್ಯಾನಿಟರಿ ಇಂಜಿನಿಯರ್‌ನ ಅಭಿಪ್ರಾಯದಲ್ಲಿ ಆ ಕಾಮಗಾರಿಯು ಸಣ್ಣ ಸ್ವರೂಪದ್ದಾಗಿದ್ದರೆ, ಅವನು ಲೈಸೆನ್ಸ್ ಪಡೆದ ಕೊಳಾಯಿಗಾರನನ್ನು ಹೊರತು ಪಡಿಸಿ ಇತರ ವ್ಯಕ್ತಿಯು ಅಂಥ ಕಾಮಗಾರಿಯನ್ನು ನಿರ್ವಹಿಸುವುದಕ್ಕಾಗಿ ಬರಹದಲ್ಲಿ ಅನುಮತಿಯನ್ನು ಕೊಡಬಹುದು.

(2) 59ನೇ ಪ್ರಕರಣದ ಉಪಬಂಧಗಳು ಯಾವುದೇ ಚರಂಡಿಗೆ ಸಂಬಂಧಪಟ್ಟ ಯಾವುದೇ ಕಾಮಗಾರಿಗೆ ಸಂಬಂಧಿಸಿದಂತೆ ಅವು ನೀರು ಸರಬರಾಜಿಗೆ ಸಂಬಂಧಪಟ್ಟ ಯಾವುದೇ ಕಾಮಗಾರಿಗೆ ಸಂಬಂಧಿಸಿದಂತೆ ಅನ್ವಯವಾಗುವ ಹಾಗೆ ಅನ್ವಯವಾಗತಕ್ಕುದು.

**83. ಕೆಲವು ಕಾರ್ಯಗಳ ಬಗ್ಗೆ ನಿಷೇಧ:-** ಯಾವನೇ ವ್ಯಕ್ತಿಯು,- (ಎ) ಯಾವುದೇ ಕಾಮಗಾರಿಗಳ ಲೈನುಗಳನ್ನು ಸ್ಥಾಪಿಸುವಲ್ಲಿ ಮಂಡಲಿಯ ಅಧಿಕಾರದ ಮೇರೆಗೆ ಕಾರ್ಯನಿರ್ವಹಿಸುತ್ತಿರುವ ಯಾವನೇ ವ್ಯಕ್ತಿಯನ್ನು ಉದ್ದೇಶಪೂರ್ವಕವಾಗಿ ಅಡ್ಡಿಪಡಿಸತಕ್ಕುದಲ್ಲ ಅಥವಾ ಅಂಥ ಕಾಮಗಾರಿಯ ಲೈನುಗಳನ್ನು ಸ್ಥಾಪಿಸುವ ಉದ್ದೇಶಕ್ಕಾಗಿ ನೆಲದಲ್ಲಿ ಜೋಡಿಸಿರುವ ಯಾವುದೇ ಕಂಬ, ಸ್ತಂಭ ಅಥವಾ ಗೂಟವನ್ನು ಹೊರಗೆಳೆಯತಕ್ಕುದಲ್ಲ ಅಥವಾ ತೆಗೆದುಹಾಕತಕ್ಕುದಲ್ಲ ಅಥವಾ ಅದೇ ಉದ್ದೇಶಕ್ಕಾಗಿ ಮಾಡಿದ ಯಾವುದೇ ಕಾಮಗಾರಿಗಳನ್ನು ವಿರೂಪಗೊಳಿಸತಕ್ಕುದಲ್ಲ ಅಥವಾ ನಾಶಪಡಿಸತಕ್ಕುದಲ್ಲ;

(ಬಿ) ಮಂಡಳಿಗೆ ಸೇರಿದ ಯಾವುದೇ ಬೀಗ, ಬಿರುಡೆ, ಕವಾಟ, ಕೊಳವೆ ಅಥವಾ ಇತರ ಕಾಮಗಾರಿ ಅಥವಾ ಸಾಧನ ಸಾಮಗ್ರಿಯನ್ನು ಬುದ್ಧಿಪೂರ್ವಕವಾಗಿ ಅಥವಾ ನಿರ್ಲಕ್ಷತೆಯಿಂದ ಒಡೆಯತಕ್ಕುದಲ್ಲ , ಹಾನಿಗೊಳಿಸತಕ್ಕುದಲ್ಲ, ತಿರುಗಿಸತಕ್ಕುದಲ್ಲ, ತೆರೆಯತಕ್ಕುದಲ್ಲ, ಮುಚ್ಚತಕ್ಕುದಲ್ಲ, ನಿಲ್ಲಿಸತಕ್ಕುದಲ್ಲ ಅಥವಾ ಅನ್ಯಥಾ ಅದರೊಂದಿಗೆ ಹಸ್ತಕ್ಷೇಪ ಮಾಡತಕ್ಕುದಲ್ಲ; ಅಥವಾ

(ಸಿ) ಮಂಡಳಿಗೆ ಸೇರಿದ ಯಾವುದೇ ಗ್ರಾಮಸಾರ ಕಾಮಗಾರಿಯ ಹರಿವನ್ನು, ಕಾನೂನುಬಾಹಿರವಾಗಿ ಅಡ್ಡಿಪಡಿಸತಕ್ಕುದಲ್ಲ ಅಥವಾ ಅದರಿಂದ ಹಾಯಿಸತಕ್ಕುದಲ್ಲ, ಎಳೆದುಕೊಳ್ಳತಕ್ಕುದಲ್ಲ ಅಥವಾ ಅದನ್ನು ಮಾರ್ಗಪಲ್ಲಟಗೊಳಿಸತಕ್ಕುದಲ್ಲ ಅಥವಾ ಅದರಿಂದ ಗ್ರಾಮಸಾರವನ್ನು ತೆಗೆದುಕೊಳ್ಳತಕ್ಕುದಲ್ಲ;

(ಡಿ) ಈ ಅಧ್ಯಾಯದ ಮೇರೆಗೆ ಅವನ ಕರ್ತವ್ಯಗಳನ್ನು ನಿರ್ವಹಿಸುವಲ್ಲಿ ಮಂಡಲಿಯ ಯಾವನೇ ಅಧಿಕಾರಿ ಅಥವಾ ಇತರ ನಿಯೋಜಿತನನ್ನು ಅಡ್ಡಿಪಡಿಸತಕ್ಕುದಲ್ಲ ಅಥವಾ ಯಾವುದೇ ಗ್ರಾಮಸಾರ ಕಾಮಗಾರಿಗೆ ಸಂಬಂಧಪಟ್ಟಂತೆ ಅದರ ಮೇರೆಗಿನ ಯಾವುದೇ ಪ್ರವೇಶ ಪರಿಶೀಲನೆ, ಪರೀಕ್ಷೆ ಅಥವಾ ವಿಚಾರಣೆಯನ್ನು ಮಾಡುವುದಕ್ಕಾಗಿ ಅವಶ್ಯವಾದ ಸಾಧನವನ್ನು ಅವನಿಗೆ ಒದಗಿಸಲು ನಿರಾಕರಿಸತಕ್ಕುದಲ್ಲ ಅಥವಾ ಉದ್ದೇಶಪೂರ್ವಕವಾಗಿ ನಿರ್ಲಕ್ಷಿಸತಕ್ಕುದಲ್ಲ.

**84. ಗ್ರಾಮಸಾರ ಚರಂಡಿ ವ್ಯವಸ್ಥೆ ಬಗ್ಗೆ ವಿನಿಯಮಗಳು:-** (1) ಮಂಡಳಿಯು, ರಾಜ್ಯ ಸರ್ಕಾರದ ಪೂರ್ವಾನುಮೋದನೆಯೊಂದಿಗೆ ಈ ಅಧ್ಯಾಯದ ಉದ್ದೇಶಗಳನ್ನು ಈಡೇರಿಸಲು ವಿನಿಯಮಗಳನ್ನು ರಚಿಸಬಹುದು.

[1][(2) ವಿಶೇಷವಾಗಿ ಮತ್ತು ಹಿಂದೆ ಹೇಳಿದ ಉಪಬಂಧಕ್ಕೆ ಪ್ರತಿಕೂಲವಾಗದಂತೆ ಅಂಥ ವಿನಿಯಮಗಳು, ಕೈಗಾರಿಕಾ ಆವರಣದ ಅಧಿಭೋಗದಾರರು, ಮಂಡಳಿಯ ಗ್ರಾಮಸಾರ ಚರಂಡಿಗಳೊಳಕ್ಕೆ ಕಾರ್ಖಾನೆಯ ಕಶ್ಮಲ ಪ್ರವಾಹವನ್ನು ಬಿಡುವುದು ಮತ್ತು ಅದನ್ನು ವಿಲೆ ಮಾಡುವುದಕ್ಕಾಗಿ ಮಂಡಳಿಗೆ ಸಂದಾಯ ಮಾಡಬೇಕಾದ ಚಾರ್ಜುಗಳಿಗಾಗಿ ಉಪಬಂಧಿಸಬಹುದು.][1]

[2][**84-ಎ. ಗ್ರಾಮಸಾರ ಚರಂಡಿ ವ್ಯವಸ್ಥೆ ಬಗೆಗಿನ ಉಪವಿಧಿಗಳು:-** (1) ನಿಯಮಗಳು ಮತ್ತು ವಿನಿಯಮಗಳ ಉಪಬಂಧಗಳಿಗೆ ಒಳಪಟ್ಟು ಮಂಡಳಿಯು, ಪೂರ್ವ ಪ್ರಕಟಣೆಯ ತರುವಾಯ,-

(ಎ) ಗ್ರಾಮಸಾರ ಚರಂಡಿಗಳ ಒಳಕ್ಕೆ ಅಸಹ್ಯಕರ ಅಥವಾ ಅಡ್ಡಿಯುಂಟುಮಾಡುವ ವಸ್ತುಗಳು, ಕಲುಷಿತ ನೀರು ಅಥವಾ ಇತರ ಕಲುಷಿತ ಮತ್ತು ಹೊಲಸು ವಸ್ತುಗಳನ್ನು ವಿಸರ್ಜಿಸುವುದನ್ನು ಅಥವಾ ಹಾಕುವುದನ್ನು ನಿಯಂತ್ರಿಸುವುದು ಅಥವಾ ನಿಷೇಧಿಸುವುದು;

1. 1966ರ ಅಧಿನಿಯಮ ಸಂಖ್ಯೆ 6ರ ಮೂಲಕ 17.3.1966 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
2. 1966ರ ಅಧಿನಿಯಮ ಸಂಖ್ಯೆ 6ರ ಮೂಲಕ 17.3.1966 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(ಬಿ) ಈ ಅಧಿನಿಯಮದಲ್ಲಿ ನಿರ್ದಿಷ್ಟವಾಗಿ ಉಪಬಂಧಿಸಿಲ್ಲದ, ಯಾವುದೇ ರೀತಿಯಲ್ಲಿ, ಗ್ರಾಮಸಾರ ಚರಂಡಿಗಳು, ವಾಯು ಸಂಚಾರ ಸುರಂಗಗಳು, ಕೊಳವೆಗಳು, ಕಕ್ಕಸುಗಳು, ಮೂತ್ರಿಗಳು, ರೊಚ್ಚುಗುಂಡಿಗಳು ಮತ್ತು ಇತರ ಗ್ರಾಮಸಾರ ಚರಂಡಿ ಕಾಮಗಾರಿಗಳ ನಿರ್ಮಾಣ, ಬದಲಾವಣೆ, ನಿರ್ವಹಣೆ, ಸಂರಕ್ಷಣೆ, ಸ್ವಚ್ಛಗೊಳಿಸುವಿಕೆ ಮತ್ತು ದುರಸ್ತಿ ಇವುಗಳನ್ನು ನಿಯಂತ್ರಿಸುವುದು;

(ಸಿ) ಗ್ರಾಮಸಾರ ಚರಂಡಿಗಳನ್ನು ಸ್ವಚ್ಛಗೊಳಿಸುವುದು;

(ಡಿ) ಮಂಡಳಿಯ ಅನುಮತಿಯಿಲ್ಲದೆ ಗ್ರಾಮಸಾರ ಚರಂಡಿಗಳ ಮೇಲೆ ಕಟ್ಟಡಗಳನ್ನು ಕಟ್ಟುವುದನ್ನು ನಿಷೇಧಿಸುವುದು;

(ಇ) ಮಂಡಳಿಯ ಗ್ರಾಮಸಾರ ಚರಂಡಿಗಳೊಂದಿಗೆ ಖಾಸಗಿ ಚರಂಡಿಗಳನ್ನು ಕೂಡಿಸುವುದು;

(ಎಫ್) ರೊಚ್ಚುಗುಂಡಿಗಳ ಸ್ಥಳ ನಿರ್ದೇಶನ ಮತ್ತು ನಿರ್ಮಾಣ;

(ಜಿ) ರೊಚ್ಚುಗುಂಡಿಗಳನ್ನು ಮುಚ್ಚುವುದು ಮತ್ತು ಅವುಗಳ ಬಗ್ಗೆ ವಾಯು ಸಂಚಾರ;

(ಹೆಚ್) ಮಂಡಳಿಯ ಗ್ರಾಮಸಾರ ಚರಂಡಿಗಳೊಳಕ್ಕೆ ಯಾವುದೇ ಕೈಗಾರಿಕಾ ಆವರಣದಿಂದ ಕಾರ್ಖಾನೆಯ ಕಶ್ಮಲ ಪ್ರವಾಹವನ್ನು ವಿಸರ್ಜನೆ ಮಾಡಬಹುದಾದಂಥ ದಿವಸದಲ್ಲಿನ ಅವಧಿ ಅಥವಾ ಅವಧಿಗಳು;

(ಐ) ಕಾರ್ಖಾನೆ ಕಶ್ಮಲ ಪ್ರವಾಹದಿಂದ ಎಲ್ಲಾ ಘನೀಕರಿಸುವ ವಸ್ತುವನ್ನು ಹೊರತುಪಡಿಸುವುದು;

(ಜೆ) ಮಂಡಳಿಯ ಗ್ರಾಮಸಾರ ಚರಂಡಿಗೆ ಅದು ಪ್ರವೇಶ ಮಾಡುವುದಕ್ಕೆ ಮುಂಚೆ ಕೈಗಾರಿಕಾ ಕಶ್ಮಲ ಪ್ರವಾಹದಿಂದ ಯಾವುದು ಮಂಡಳಿಯ ಅಭಿಪ್ರಾಯದಲ್ಲಿ ಒಂಟಿಯಾಗಿಯೇ ಆಗಲಿ ಅಥವಾ ಮಂಡಳಿಯ ಗ್ರಾಮಸಾರ ಚರಂಡಿಗಳ ಮೂಲಕ ಹರಿದು ಹೋಗುವಾಗ ಅದು ಸಂಪರ್ಕವನ್ನು ಹೊಂದುವ ಸಂಭವವಿರುವಂಥ ಯಾವುದೇ ವಸ್ತುವಿನ ಸಂಯೋಜನೆಯೊಂದಿಗೆ ಆಗಲಿ, ಆ ಗ್ರಾಮಸಾರ ಚರಂಡಿಗಳಿಗೆ ಹಾನಿಯುಂಟು ಮಾಡುವುದೋ ಅಥವಾ ಅಡ್ಡಿಯನ್ನುಂಟು ಮಾಡುವುದೋ ಅಥವಾ ಆ ಗ್ರಾಮಸಾರ ಚರಂಡಿಗಳಿಂದ ಆ ಗ್ರಾಮಸಾರದ ಸಂಸ್ಕರಣೆ ಅಥವಾ ವಿಲೆಯನ್ನು ವಿಶೇಷವಾಗಿ ಕಷ್ಟವಾಗಿಸುವುದೋ ಅಥವಾ ದುಬಾರಿಯಾಗಿಸುವುದೋ ಆ ಯಾವುದೇ ಘಟಕವನ್ನು ಹೊರಹಾಕುವುದು;

(ಕೆ) ಯಾವುದನ್ನು ಯಾವುದೇ ಸಮ್ಮತಿ ಅಥವಾ ಅನುಮತಿಯಿಲ್ಲದೆ, ಯಾವುದೇ ಒಂದು ದಿವಸದಂದು ಯಾವುದೇ ಕೈಗಾರಿಕಾ ಆವರಣದಿಂದ ಮಂಡಳಿಯ ಗ್ರಾಮಸಾರ ಚರಂಡಿಯೊಳಕ್ಕೆ ವಿಸರ್ಜಿಸಬಹುದೋ ಆ ಕಾರ್ಖಾನೆಯ ಕಶ್ಮಲ ಪ್ರವಾಹದ ಗರಿಷ್ಠ ಪ್ರಮಾಣ ಮತ್ತು ಅಂಥ ಸಮ್ಮತಿ ಅಥವಾ ಅನುಮತಿಯಿಲ್ಲದೆ ಯಾವುದೇ ಕೈಗಾರಿಕಾ ಆವರಣದಿಂದ ಮಂಡಳಿಯ ಗ್ರಾಮಸಾರ ಚರಂಡಿಗಳೊಳಕ್ಕೆ ಕಾರ್ಖಾನೆಯ ಕಶ್ಮಲ ಪ್ರವಾಹವನ್ನು ವಿಸರ್ಜಿಸಬಹುದಾದಂಥ ಗರಿಷ್ಠ ಪ್ರಮಾಣ;

(ಎಲ್) ಕಾರ್ಖಾನೆಯ ಕಶ್ಮಲ ಪ್ರವಾಹವು ಮಂಡಳಿಯ ಗ್ರಾಮಸಾರ ಚರಂಡಿಗಳೊಳಕ್ಕೆ ವಿಸರ್ಜನೆಯಾಗುವ ಕಾಲದಲ್ಲಿ, ಅದರ ಶಾಖವನ್ನು ನಿಯಂತ್ರಿಸುವುದು ಮತ್ತು ಅಂಥ ವಿಸರ್ಜನೆಯ ಕಾಲದಲ್ಲಿ ಕಾರ್ಖಾನೆಯ ಕಶ್ಮಲ ಪ್ರವಾಹದ ಯಥಾಸ್ಥಿತಿಯನ್ನು (ಹಾಗೆಂದರೆ ಆಮ್ಲೀಯ ಅಥವಾ ಕ್ಷಾರೀಯವಲ್ಲದ) ಸುನಿಶ್ಚಿತಗೊಳಿಸಿಕೊಳ್ಳುವುದು;

(ಎಂ) ಕೈಗಾರಿಕಾ ಆವರಣದಿಂದ ಮಂಡಳಿಯ ಗ್ರಾಮಸಾರ ಚರಂಡಿಗಳೊಳಕ್ಕೆ ಹರಿಯುವುದರ ಮಾದರಿಗಳನ್ನು ಯಾವುದೇ ಕಾಲದಲ್ಲಿ ಸುಲಭವಾಗಿ ಒಬ್ಬ ವ್ಯಕ್ತಿಯು ತೆಗೆದುಕೊಳ್ಳುವುದನ್ನು ಸಾಧ್ಯಗೊಳಿಸುವಂಥ ಪರಿಶೀಲನಾ ಛೇಂಬರುಗಳು ಅಥವಾ ಆಳು ಗುಂಡಿಯನ್ನು ಒದಗಿಸುವುದು ಮತ್ತು ಇಟ್ಟುಕೊಂಡುಬರುವುದು;

(ಎನ್) ಯಾವುದೇ ಕೈಗಾರಿಕಾ ಆವರಣದಿಂದ ಮಂಡಳಿಯ ಗ್ರಾಮಸಾರ ಚರಂಡಿಗಳೊಳಕ್ಕೆ ವಿಸರ್ಜಿಸಲಾಗುತ್ತಿರುವ ಯಾವುದೇ ಕಾರ್ಖಾನೆಯ ಕಶ್ಮಲ ಪ್ರವಾಹದ ಗಾತ್ರವನ್ನು ಅಳತೆ ಮಾಡಲು ಅಗತ್ಯವಾಗಬಹುದಾದಂಥ ಮೀಟರ್‌ಗಳನ್ನು ಒದಗಿಸುವುದು ಮತ್ತು ಇಟ್ಟುಕೊಂಡು ಬರುವುದು ಮತ್ತು ಅಂಥ ಮೀಟರುಗಳನ್ನು ಪರೀಕ್ಷಿಸುವುದು

- ಇವುಗಳಿಗಾಗಿ ಉಪಬಂಧಿಸಲು ಉಪವಿಧಿಗಳನ್ನು ರಚಿಸಬಹುದು.

(3) ಈ ಪ್ರಕರಣದ ಮೇರೆಗೆ ಯಾವುದೇ ವಿನಿಯಮವನ್ನು ರಚಿಸುವಲ್ಲಿ, ಮಂಡಳಿಯು, ಅದರ ಉಲ್ಲಂಘನೆಯು ಒಂದು ನೂರು ರೂಪಾಯಿಗಳಿಗೆ ವಿಸ್ತರಿಸಬಹುದಾದಂಥ ಜುಲ್ಮಾನೆಯಿಂದ ಮತ್ತು ಮುಂದುವರಿಯುತ್ತಿರುವ ಉಲ್ಲಂಘನೆಯ ಸಂದರ್ಭದಲ್ಲಿ, ಅಂಥ ಉಲ್ಲಂಘನೆಯನ್ನು ಮುಂದುವರಿಸದಿರಲು ಮಂಡಳಿಯಿಂದ ನೋಟೀಸನ್ನು ಸ್ವೀಕರಿಸಿದ ತರುವಾಯ ಉಲ್ಲಂಘನೆಯು ಮುಂದುವರಿಯುತ್ತಿರುವಂಥ ಕಾಲದಲ್ಲಿ ಪ್ರತಿ ದಿವಸಕ್ಕಾಗಿ ಹತ್ತು ರೂಪಾಯಿಗಳಿಗೆ ವಿಸ್ತರಿಸಬಹುದಾದಂಥ ಹೆಚ್ಚಿನ ಜುಲ್ಮಾನೆಯಿಂದ ದಂಡನೀಯವಾಗತಕ್ಕುದೆಂದು ಉಪಬಂಧಿಸಬಹುದು.

**85. ಕೆಲವು ಅಪರಾಧಗಳಿಗಾಗಿ ದಂಡನೆ:-** ಯಾರೇ ಆಗಲಿ,-

(ಎ) ಈ ಕೆಳಕಂಡ ಕೋಷ್ಟಕದ ಮೊದಲನೇ ಅಂಕಣದಲ್ಲಿ ನಮೂದಿಸಿರುವ ಈ ಅಧಿನಿಯಮದ ಯಾವುದೇ ಉಪಬಂಧವನ್ನು ಉಲ್ಲಂಘಿಸಿದರೆ; ಅಥವಾ

(ಬಿ) ಸದರಿ ಯಾವುದೇ ಉಪಬಂಧದ ಮೇರೆಗೆ ಅವನಿಗೆ ಕೊಟ್ಟ ಕಾನೂನು ಬದ್ಧ ಯಾವುದೇ ಆದೇಶ ಅಥವಾ ನಿರ್ದೇಶನ ಅಥವಾ ಅವನಿಗೆ ಕಾನೂನುಬದ್ಧವಾಗಿ ಮಾಡಿಕೊಂಡ ಯಾವುದೇ ಕಡ್ಡಾಯ ಕೋರಿಕೆಯನ್ನು ಪಾಲಿಸಲು ತಪ್ಪಿದರೆ, ಅವನು,-

(i) ಸದರಿ ಕೋಷ್ಟಕದ ಮೂರನೇ ಅಂಕಣದಲ್ಲಿ ಆ ಬಗ್ಗೆ ನಿರ್ದಿಷ್ಟಪಡಿಸಿದ ಮೊಬಲಗಿಗೆ ವಿಸ್ತರಿಸಬಹುದಾದಂಥ ಜುಲ್ಮಾನೆಯಿಂದ; ಮತ್ತು

(ii) ಮುಂದುವರಿಯುತ್ತಿರುವ ಉಲ್ಲಂಘನೆ ಅಥವಾ ತಪ್ಪುವಿಕೆಯ ಸಂದರ್ಭದಲ್ಲಿ, ಅಂಥ ಮೊದಲನೇ ಉಲ್ಲಂಘನೆ ಅಥವಾ ತಪ್ಪುವಿಕೆಗಾಗಿನ ಅಪರಾಧವು ನಿರ್ಣಯವಾದ ತರುವಾಯ ಅಂಥ ಉಲ್ಲಂಘನೆ ಅಥವಾ ತಪ್ಪುವಿಕೆಯು ಮುಂದುವರೆಯುತ್ತಿರುವಂಥ ಕಾಲದಲ್ಲಿ ಪ್ರತಿಯೊಂದು ದಿವಸಕ್ಕಾಗಿ ಆ ಕೋಷ್ಟಕದ ನಾಲ್ಕನೇ ಅಂಕಣದಲ್ಲಿ ನಿರ್ದಿಷ್ಟಪಡಿಸಿದ ಮೊಬಲಗಿಗೆ ವಿಸ್ತರಿಸಬಹುದಾದಂಥ ಹೆಚ್ಚಿನ ಜುಲ್ಮಾನೆಯಿಂದ

- ದಂಡನೀಯನಾಗತಕ್ಕುದು.

**ಕೋಷ್ಟಕ**

| ಅಧಿನಿಯಮದ ಉಪಬಂಧಗಳು | ವಿಷಯ | ವಿಧಿಸಬಹುದಾದ ಜುಲ್ಮಾನೆ | ವಿಧಿಸಬಹುದಾದಂಥ ನಿತ್ಯದ ಜುಲ್ಮಾನೆ |
|---|---|---|---|
| 1 | 2 | 3 | 4 |
| | | ರೂ. ಗಳು | ರೂ. ಗಳು |
| ಪ್ರಕರಣ 65 | ಮಂಡಳಿಯ ಗ್ರಾಮಸಾರ ಚರಂಡಿಗಳು ಅಥವಾ ಮಂಡಳಿಯ ಗ್ರಾಮಸಾರ ಚರಂಡಿಗಳೊಂದಿಗೆ ಸಂಪರ್ಕವನ್ನು ಹೊಂದಿರುವ ಚರಂಡಿಗಳು ಅಥವಾ ಗ್ರಾಮಸಾರ ಚರಂಡಿಗಳಲ್ಲಿನ ಒಳ ವಸ್ತುಗಳು ನಿರಾತಂಕವಾಗಿ ಹರಿದು ಹೋಗುವುದಕ್ಕೆ ಹಾನಿ ಅಥವಾ ಅದಕ್ಕೆ ಅಡ್ಡಿಯನ್ನುಂಟು ಮಾಡುವುದು. | 100 | 50 |
| ಪ್ರಕರಣ 66 ಉಪಪ್ರಕರಣ(2) | ನೋಟೀಸು ಇಲ್ಲದೆ ಮಂಡಳಿಯ ಗ್ರಾಮಸಾರ ಚರಂಡಿಗಳೊಂದಿಗೆ ಖಾಸಗಿ ಚರಂಡಿಯನ್ನು ಕೂಡಿಸತಕ್ಕುದಲ್ಲ. | 50 | 5 |
| ಪ್ರಕರಣ 67 | ಚರಂಡಿ ವ್ಯವಸ್ಥೆ ಇಲ್ಲದ ಆವರಣದ ಚರಂಡಿ ವ್ಯವಸ್ಥೆ ಗಾಗಿನ ಕಡ್ಡಾಯ ಕೋರಿಕೆಯನ್ನು ಪಾಲಿಸದಿರುವುದು. | 100 | 25 |
| ಪ್ರಕರಣ 68 | ಚರಂಡಿಗಳಿಲ್ಲದ ಹೊಸ ಆವರಣದ ನಿರ್ಮಾಣ. | 1,000 | - |
| ಪ್ರಕರಣ 69 | ಆವರಣಗಳ ಯಾವುದೇ ಗುಂಪು ಅಥವಾ ಬ್ಲಾಕುಗಳಿಗಾಗಿನ ಚರಂಡಿ ವ್ಯವಸ್ಥೆಯ ಕಾಮಗಾರಿಗಳ ನಿರ್ವಹಣೆಗಾಗಿನ ಕಡ್ಡಾಯ ಕೋರಿಕೆಯನ್ನು ಪಾಲಿಸದಿರುವುದು. | 100 | - |
| ಪ್ರಕರಣ 70 | ಕೆಲವು ಸಂದರ್ಭಗಳಲ್ಲಿ ಖಾಸಗಿ ಚರಂಡಿಗಳನ್ನು ಮುಚ್ಚಲು ಅಥವಾ ಅವುಗಳ ಉಪಯೋಗವನ್ನು ಸೀಮಿತಗೊಳಿಸುವ ನಿರ್ದೇಶನವನ್ನು ಪಾಲಿಸದಿರುವುದು. | 50 | - |
| ಪ್ರಕರಣ 71 | ಚರಂಡಿಯ ಒಡೆಯನಲ್ಲದ ಇತರ ವ್ಯಕ್ತಿಯು ಅದನ್ನು ಉಪಯೋಗಿಸುವುದರ ಬಗ್ಗೆ ಸ್ಯಾನಿಟರಿ ಇಂಜಿನಿಯರನ ಆದೇಶಗಳನ್ನು ಪಾಲಿಸದಿರುವುದು. | 50 | - |

| 1 | 2 | 3 | 4 |
|---|---|---|---|
| ಪ್ರಕರಣ 72 | ಗ್ರಾಮಸಾರ ಚರಂಡಿ ವ್ಯವಸ್ಥೆ ಮತ್ತು ಮಳೆಯ ನೀರು ಚರಂಡಿಗಳನ್ನು ವಿಭಿನ್ನವಾಗಿಡುವುದಕ್ಕಾಗಿನ ಕಡ್ಡಾಯ ಕೋರಿಕೆಯನ್ನು ಪಾಲಿಸದಿರುವುದು. | 50 | - |
| ಪ್ರಕರಣ 73 | ಅಂಗಳ ಇತ್ಯಾದಿಗಳನ್ನು ನೆಲಗಟ್ಟು ಮಾಡುವುದಕ್ಕಾಗಿನ ಕಡ್ಡಾಯ ಕೋರಿಕೆಯನ್ನು ಪಾಲಿಸದಿರುವುದು. | 50 | - |
| ಪ್ರಕರಣ 75 | ಬರಹದಲ್ಲಿನ ಅನುಮತಿ ಇಲ್ಲದೆ ಮಂಡಳಿಯ ಗ್ರಾಮಸಾರ ಚರಂಡಿಗಳೊಂದಿಗೆ ಸಂಪರ್ಕ. | 200 | 50 |
| ಪ್ರಕರಣ 78 ಉಪಪ್ರಕರಣ (4) | ಕೊಳವೆ ಅಥವಾ ಚರಂಡಿಯನ್ನು ಮುಚ್ಚಲು, ತೆಗೆದುಹಾಕಲು ಅಥವಾ ಮಾರ್ಗಪಲ್ಲಟ ಮಾಡುವ ಬಗ್ಗೆ ಕಡ್ಡಾಯ ಕೋರಿಕೆಯನ್ನು ಪಾಲಿಸದಿರುವುದು. | 50 | 5 |
| ಪ್ರಕರಣ 82 ಉಪಪ್ರಕರಣ (1) | ಲೈಸೆನ್ಸು ಪಡೆದ ಕೊಳಾಯಿಗಾರನನ್ನು ಹೊರತುಪಡಿಸಿ ಇತರ ವ್ಯಕ್ತಿಯು ಕಾಮಗಾರಿಯನ್ನು ನಿರ್ವಹಿಸುವುದು. | 200 | - |
| ಪ್ರಕರಣ 82, ಉಪಪ್ರಕರಣ (2) ಪ್ರಕರಣ 59 (2) ಇದರೊಂದಿಗೆ ಓದಿಕೊಂಡು | ನಿಯೋಜಿಸಿಕೊಂಡ ಲೈಸೆನ್ಸು ಪಡೆದ ಕೊಳಾಯಿಗಾರನ ಹೆಸರನ್ನು ಅಗತ್ಯ ಪಡಿಸಿದಾಗ ಒದಗಿಸಲು ತಪ್ಪುವುದು. | 100 | - |
| ಪ್ರಕರಣ 82 ಉಪಪ್ರಕರಣ (6) ಪ್ರಕರಣ 59 (2) ಇದರೊಂದಿಗೆ ಓದಿಕೊಂಡು | ಲೈಸೆನ್ಸು ಪಡೆದ ಕೊಳಾಯಿಗಾರರು ನಿಯಮಿಸಿದ ಚಾರ್ಜುಗಳಿಗಿಂತ ಹೆಚ್ಚಿಗೆ ತಗಾದೆಮಾಡಕೂಡದು. | 100 | - |
| ಪ್ರಕರಣ 82 ಉಪಪ್ರಕರಣ (8) ಪ್ರಕರಣ 59 (2) ಇದರೊಂದಿಗೆ ಓದಿಕೊಂಡು | ಲೈಸೆನ್ಸು ಪಡೆದ ಕೊಳಾಯಿಗಾರರು ವಿನಿಯಮಗಳನ್ನು ಉಲ್ಲಂಘಿಸ-ಕೂಡದು ಅಥವಾ ಕಾಮಗಾರಿಯನ್ನು ಅಜಾಗರೂಕತೆ ಅಥವಾ ನಿರ್ಲಕ್ಷ್ಯತೆಯಿಂದ ನಿರ್ವಹಿಸಕೂಡದು, ಇತ್ಯಾದಿ. | 100 | - |
| ಪ್ರಕರಣ 83 | ಗ್ರಾಮಸಾರ ಚರಂಡಿ ಕಾಮಗಾರಿಗಳಿಗೆ ಸಂಬಂಧಪಟ್ಟ ಬುದ್ಧಿಪೂರ್ವಕ ಅಥವಾ ನಿರ್ಲಕ್ಷ್ಯತೆಯ ಕಾರ್ಯಗಳ ನಿಷೇಧ. | 100 | - |

## ಅಧ್ಯಾಯ-VI

### ಸಂಕೀರ್ಣ

**86. ವಾರ್ಷಿಕ ವರದಿಗಳು, ಅಂಕಿ ಅಂಶಗಳು ಮತ್ತು ವಿವರ ಪಟ್ಟಿಕೆಗಳು :-** (1) ಮಂಡಳಿಯು, ನಿಯಮಗಳ ಮೂಲಕ ನಿಯಮಿಸಬಹುದಾದಂಥ ದಿನಾಂಕಕ್ಕೆ ಮುಂಚೆ ಮತ್ತು ಅಂಥ ನಮೂನೆಯಲ್ಲಿ, ನಿಯಮಗಳ ಮೂಲಕ ನಿಯಮಿಸಬಹುದಾದಂಥ ವಿಷಯಗಳ ಬಗ್ಗೆ ವಾರ್ಷಿಕ ವರದಿಯನ್ನು ರಾಜ್ಯ ಸರ್ಕಾರಕ್ಕೆ ಒಪ್ಪಿಸತಕ್ಕುದು ಮತ್ತು ರಾಜ್ಯ ಸರ್ಕಾರವು ಅಂಥ ವರದಿಯನ್ನು ರಾಜಪತ್ರದಲ್ಲಿ ಪ್ರಕಟಿಸುವಂತೆ ಮಾಡತಕ್ಕುದು.

(2) (1)ನೇ ಉಪಪ್ರಕರಣದ ಉಪಬಂಧಗಳಿಗೆ ಬಾಧಕವಾಗದಂತೆ, ಮಂಡಳಿಯು, ಪ್ರತಿಯೊಂದು ಹಣಕಾಸು ವರ್ಷವು ಮುಕ್ತಾಯವಾದ ತರುವಾಯ, ಆದಷ್ಟು ಬೇಗ [1][ವಿನಿಯಮಗಳ][1] ಮೂಲಕ ನಿಯಮಿಸಬಹುದಾದಂಥ ನಮೂನೆಯಲ್ಲಿ ಹಿಂದಿನ ಹಣಕಾಸು ವರ್ಷದ ಅವಧಿಯಲ್ಲಿನ ಅದರ ಚಟುವಟಿಕೆಗಳ ಬಗ್ಗೆ ವಿವರವನ್ನು ಕೊಟ್ಟು ವರದಿಯನ್ನು ರಾಜ್ಯ ಸರ್ಕಾರಕ್ಕೆ ಒಪ್ಪಿಸತಕ್ಕುದು ಮತ್ತು ಆ ವರದಿಯ ಮುಂದಿನ ಹಣಕಾಸು ವರ್ಷದಲ್ಲಿ ಮಂಡಲಿಯು ಕೈಗೆತ್ತಿಕೊಳ್ಳುವ ಸಂಭವವಿರುವಂಥ ಚಟುವಟಿಕೆಗಳು ಯಾವುದಾದರೂ ಇದ್ದರೆ ಅವುಗಳ ಬಗ್ಗೆಯೂ ಸಹ ಒಂದು ವಿವರವನ್ನು ಕೊಡತಕ್ಕುದು; ಮತ್ತು ರಾಜ್ಯ ಸರ್ಕಾರವು, ಅಂಥ ಪ್ರತಿಯೊಂದು ವರದಿಯನ್ನು ರಾಜ್ಯ ಸರ್ಕಾರವು ಅದನ್ನು ಸ್ವೀಕರಿಸಿದ ತರುವಾಯ ಆದಷ್ಟು ಬೇಗ ರಾಜ್ಯ ವಿಧಾನಮಂಡಲದ ಮುಂದೆ ಇಡುವಂತೆ ಮಾಡತಕ್ಕುದು.

(3) ಮಂಡಳಿಯು, ರಾಜ್ಯ ಸರ್ಕಾರವು ನಿರ್ದೇಶಿಸಬಹುದಾದಂಥ ಕಾಲದಲ್ಲಿ ಮತ್ತು ಅಂಥ ನಮೂನೆ ಮತ್ತು ರೀತಿಯಲ್ಲಿ [2][xxx][2] ಅಂಥ ಅಂಕಿ ಅಂಶಗಳು ಮತ್ತು ವಿವರಪಟ್ಟಿಕೆಗಳು ಮತ್ತು ಕಾಲಕಾಲಕ್ಕೆ ರಾಜ್ಯಸರ್ಕಾರವು ಅಗತ್ಯಪಡಿಸಬಹುದಾದಂತೆ ಯಾವುದೇ ಪ್ರಸ್ತಾವಿತ ಅಥವಾ ಅಸ್ತಿತ್ವದಲ್ಲಿರುವ ಯೋಜನೆಯ ಬಗ್ಗೆ ಅಂಥ ವಿವರಗಳನ್ನು ರಾಜ್ಯ ಸರ್ಕಾರಕ್ಕೆ ಒದಗಿಸತಕ್ಕುದು.

**87. ನಿಯಮ ರಚನಾಧಿಕಾರ :-** (1) ರಾಜ್ಯ ಸರ್ಕಾರವು, ಪೂರ್ವ ಪ್ರಕಟಣೆಯ ತರುವಾಯ ಅಧಿಸೂಚನೆಯ ಮೂಲಕ ಈ ಅಧಿನಿಯಮದ ಉಪಬಂಧಗಳನ್ನು ಜಾರಿಗೊಳಿಸಲು ನಿಯಮಗಳನ್ನು ರಚಿಸಬಹುದು.

(2) ವಿಶೇಷವಾಗಿ ಮತ್ತು ಹಿಂದೆ ಹೇಳಿದ ಅಧಿಕಾರದ ಸಾಮಾನ್ಯಾನ್ವಯಕ್ಕೆ ಬಾಧಕವಾಗದಂತೆ, ಅಂಥ ನಿಯಮಗಳು,-

(ಎ) ಅಧ್ಯಕ್ಷರ ಅಧಿಕಾರಗಳು ಮತ್ತು ಮಂಡಳಿಯ ಅಧ್ಯಕ್ಷ ಮತ್ತು ಇತರ ಸದಸ್ಯರ ಪದಾವಧಿ, ಯಾವ ಷರತ್ತುಗಳ ಮೇರೆಗೆ ಅವರು ಮರುನೇಮಕಾತಿಗಾಗಿ ಅರ್ಹರಾಗಿರತಕ್ಕುದೋ ಆ ಷರತ್ತುಗಳು ಮತ್ತು ಅವರ ಪರಿಶ್ರಮಧನ, ಭತ್ಯಗಳು ಮತ್ತು ಇತರ ಸೇವಾ ಷರತ್ತುಗಳು;

(ಬಿ) ಸಮಾಲೋಚನಾ ಸಮಿತಿಯ ಸದಸ್ಯರ ನೇಮಕಾತಿಯ ನಿಬಂಧನೆಗಳು ಮತ್ತು ಷರತ್ತುಗಳು, ಅಂಥ ಸಮಿತಿಯ ಸಭೆಗಳನ್ನು ಕರೆಯುವುದು ಮತ್ತು ಅವುಗಳಲ್ಲಿ ವ್ಯವಹಾರವನ್ನು ನಡೆಸುವುದು;

(ಸಿ) 17ನೇ ಪ್ರಕರಣದ ಮೇರೆಗೆ ಮಂಡಲಿಯು ಯಾವ ನಮೂನೆಯಲ್ಲಿ ವಾರ್ಷಿಕ ಹಣಕಾಸು ವಿವರಣಾ ಪಟ್ಟಿ ಮತ್ತು ಪೂರಕ ವಿವರಣಾ ಪಟ್ಟಿಗಳನ್ನು ತಯಾರಿಸತಕ್ಕುದೋ ಆ ನಮೂನೆ ಮತ್ತು ಅದರಲ್ಲಿ ಒಳಗೊಳ್ಳಬೇಕಾದ ವಿವರಗಳು;

(ಡಿ) ಮಂಡಳಿಯು ಯಾವ ಷರತ್ತಿಗೊಳಪಟ್ಟು 21ನೇ ಪ್ರಕರಣದ ಮೇರೆಗೆ ಸಾಲ ತೆಗೆದುಕೊಳ್ಳಬಹುದೋ ಆ ಷರತ್ತುಗಳು;

(ಇ) ಮಂಡಳಿಯು ಹೊರಡಿಸಿದ ಸ್ಟಾಕನ್ನು ಯಾವ ರೀತಿಯಲ್ಲಿ ಕೊಡತಕ್ಕುದೋ, ವರ್ಗಾಯಿಸತಕ್ಕುದೋ, ವ್ಯವಹರಿಸತಕ್ಕುದೋ ಮತ್ತು ವಾಪಸ್ಸು ಪಡೆಯತಕ್ಕುದೋ ಆ ರೀತಿ;

(ಎಫ್) ಮಂಡಳಿಯ ಲೆಕ್ಕಪತ್ರಗಳನ್ನು ಯಾವ ರೀತಿಯಲ್ಲಿ 25ನೇ ಪ್ರಕರಣದ ಮೇರೆಗೆ ಪ್ರಕಟಿಸತಕ್ಕುದೋ ಆ ರೀತಿ;

(ಜಿ) 86ನೇ ಪ್ರಕರಣದ ಮೇರೆಗೆ ಮಂಡಳಿಯ ವಾರ್ಷಿಕ ವರದಿಯನ್ನು ಯಾವ ನಮೂನೆಯಲ್ಲಿ ಮತ್ತು ಯಾವ ದಿನಾಂಕದ ಒಳಗೆ ಒಪ್ಪಿಸತಕ್ಕುದೋ ಆ ನಮೂನೆ ಮತ್ತು ಆ ಪ್ರಕರಣದ ಮೇರೆಗೆ ಮಂಡಲಿಯು ಅಂಕಿ ಅಂಶಗಳು ಮತ್ತು ವಿವರಪಟ್ಟಿಗಳನ್ನು ಒದಗಿಸುವ ರೀತಿ

- ಇವುಗಳಿಗಾಗಿ ಉಪಬಂಧಿಸಬಹುದು.

**88. ವಿನಿಯಮಗಳು :-** (1) ಮಂಡಳಿಯು, ರಾಜ್ಯ ಸರ್ಕಾರದ ಪೂರ್ವಾನುಮೋದನೆಯೊಂದಿಗೆ ಈ ಕೆಳಕಂಡ ಎಲ್ಲಾ ಅಥವಾ ಯಾವುದೇ ವಿಷಯಕ್ಕಾಗಿ ಉಪಬಂಧಿಸಲು, ಈ ಅಧಿನಿಯಮ ಮತ್ತು ಅದರ ಮೇರೆಗೆ ರಚಿಸಿದ ನಿಯಮಗಳಿಗೆ ಅಸಂಗತವಾಗಿಲ್ಲದ ವಿನಿಯಮಗಳನ್ನು ರಚಿಸಬಹುದು, ಎಂದರೆ:-

(ಎ) ಮಂಡಳಿಯ ನಿಧಿಗಳು ಮತ್ತು ಅದರ ಇತರ ಸ್ವತ್ತುಗಳ ವಹಿವಾಟು ಮತ್ತು ಅದರ ಲೆಕ್ಕಪತ್ರಗಳನ್ನು ಇಟ್ಟುಕೊಂಡು ಬರುವುದು;

(ಬಿ) ಮಂಡಳಿಯ ಸಭೆಗಳನ್ನು ಕರೆಯುವುದು ಮತ್ತು ನಡೆಸುವುದು ಮತ್ತು ಅಂಥ ಸಭೆಗಳನ್ನು ಯಾವ ಕಾಲದಲ್ಲಿ ಮತ್ತು ಸ್ಥಳಗಳಲ್ಲಿ ನಡೆಸತಕ್ಕುದೋ ಆ ಕಾಲಗಳು ಮತ್ತು ಸ್ಥಳಗಳು ಮತ್ತು ಅದರಲ್ಲಿ ವ್ಯವಹಾರವನ್ನು ನಡೆಸುವುದು ಮತ್ತು ಕೋರಂ ಅನ್ನು ರೂಪಿಸಲು ಅವಶ್ಯವಾದ ಸದಸ್ಯರುಗಳ ಸಂಖ್ಯೆ;

1. 1966ರ ಅಧಿನಿಯಮ ಸಂಖ್ಯೆ 6ರ ಮೂಲಕ 17.3.1966 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
2. 1966ರ ಅಧಿನಿಯಮ ಸಂಖ್ಯೆ 6ರ ಮೂಲಕ 17.3.1966 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

(ಸಿ) ಮಂಡಳಿಯ ಅಧಿಕಾರಿಗಳು ಮತ್ತು ನೌಕರರ ಕರ್ತವ್ಯಗಳು ಮತ್ತು ಅವರ ಸಂಬಳಗಳು, ಭತ್ಯೆಗಳು ಮತ್ತು ಇತರ ಸೇವಾ ಷರತ್ತುಗಳು;

[1][(ಡಿ) ಯಾವುದೇ ಉಪವಿಧಿಯ ಉಲ್ಲಂಘನೆಗಾಗಿ ವಿಧಿಸಬಹುದಾದಂಥ ಜುಲ್ಮಾನೆ, ಅದನ್ನು ಒಂದು ನೂರು ರೂಪಾಯಿಗಳಿಗೆ ವಿಸ್ತರಿಸಬಹುದು ಮತ್ತು ಮುಂದುವರಿಯುತ್ತಿರುವ ಉಲ್ಲಂಘನೆಯ ಸಂದರ್ಭದಲ್ಲಿ ಮಂಡಳಿಯಿಂದ ಆ ಉಲ್ಲಂಘನೆಯನ್ನು ಮುಂದುವರಿಸಕೂಡದು ಎಂಬ ಬಗ್ಗೆ ನೋಟೀಸನ್ನು ಸ್ವೀಕರಿಸಿದ ತರುವಾಯ ಉಲ್ಲಂಘನೆಯು ಮುಂದುವರಿಯುತ್ತಿರುವಂಥ ಕಾಲದಲ್ಲಿ ಪ್ರತಿಯೊಂದು ದಿವಸಕ್ಕೆ ಹತ್ತು ರೂಪಾಯಿಗಳಿಗೆ ವಿಸ್ತರಿಸಬಹುದಾದಂಥ ಹೆಚ್ಚಿನ ಜುಲ್ಮಾನೆ;][1]

(ಇ) ಟೆಂಡರುಗಳನ್ನು ಕರೆಯುವುದು, ಪರ್ಯಾಲೋಚಿಸುವುದು ಮತ್ತು ಅಂಗೀಕರಿಸುವುದು ಇವುಗಳ ಬಗ್ಗೆ ಮಂಡಲಿಯು ಅನುಸರಿಸಬೇಕಾದ ಪ್ರಕ್ರಿಯೆ;

(ಎಫ್) ಯಾವುದರ ಬಗ್ಗೆ ವಿನಿಯಮಗಳನ್ನು ರಚಿಸುವುದು ಅವಶ್ಯವಾಗಿರುವುದೋ ಅಥವಾ ವಿಹಿತವಾಗಿರುವುದೋ ಅವುಗಳ ಬಗ್ಗೆ ಈ ಅಧಿನಿಯಮದ ಮೇರೆಗಿನ ಮಂಡಳಿಯ ಪ್ರಕಾರ್ಯಗಳಿಂದ ಉದ್ಭವಿಸುವ ಯಾವುದೇ ಇತರ ವಿಷಯ.

(2) ಈ ಅಧಿನಿಯಮದ ಮೇರೆಗೆ ವಿನಿಯಮಗಳ ರಚನಾಧಿಕಾರವು ಪೂರ್ವ ಪ್ರಕಟಣೆಯ ಷರತ್ತಿಗೆ ಒಳಪಟ್ಟಿರುತ್ತದೆ.

**89. ರಾಜ್ಯ ಸರ್ಕಾರದಿಂದ ನಿರ್ದೇಶನಗಳು:-** (1) ಅದರ ಪ್ರಕಾರ್ಯಗಳನ್ನು ನಿರ್ವಹಿಸುವಲ್ಲಿ, ಮಂಡಳಿಯು, ರಾಜ್ಯ ಸರ್ಕಾರವು ಅದಕ್ಕೆ ಕೊಡಬಹುದಾದಂಥ ಕಾರ್ಯ ನೀತಿಯ ಪ್ರಶ್ನೆಗಳ ಬಗ್ಗೆ ಅಂಥ ನಿರ್ದೇಶನಗಳ ಮೂಲಕ ಮಾರ್ಗದರ್ಶನವನ್ನು ಪಡೆದುಕೊಳ್ಳತಕ್ಕದು:

[2][ಪರಂತು, ಅಂಥ ನಿರ್ದೇಶನವನ್ನು ಮಂಡಳಿಯೊಂದಿಗೆ ಸಮಾಲೋಚಿಸಿದ ತರುವಾಯ ಕೊಡತಕ್ಕದು.][2]

(2) ಯಾವುದು ಕಾರ್ಯನೀತಿಯ ಪ್ರಶ್ನೆ ಎಂಬ ಬಗ್ಗೆ ಯಾವುದೇ ಭಿನ್ನಾಭಿಪ್ರಾಯದ ಸಂದರ್ಭದಲ್ಲಿ ಅದರ ಬಗ್ಗೆ ರಾಜ್ಯ ಸರ್ಕಾರದ ತೀರ್ಮಾನವು ಅಂತಿಮವಾಗಿರತಕ್ಕದು.

**90. ಲೈಸೆನ್ಸ್‌ಗಳು ಮತ್ತು ಬರಹದಲ್ಲಿನ ಅನುಮತಿಗಳು :-** (1) ಈ ಅಧಿನಿಯಮ ಅಥವಾ ಅದರ ಮೇರೆಗೆ ರಚಿಸಿದ ಯಾವುದೇ ನಿಯಮ ಅಥವಾ ವಿನಿಯಮದಲ್ಲಿ ಯಾವುದೇ ಉದ್ದೇಶಕ್ಕಾಗಿ ಲೈಸೆನ್ಸ್ ಅಥವಾ ಬರಹದಲ್ಲಿನ ಅನುಮತಿಯನ್ನು ಕೊಡಬಹುದೋ ಎಂಬ ಬಗ್ಗೆ ಉಪಬಂಧಿಸಿರುವಾಗಲೆಲ್ಲ ಅಂಥ ಲೈಸೆನ್ಸ್ ಅಥವಾ ಬರಹದಲ್ಲಿನ ಅನುಮತಿಗೆ ಸಂದರ್ಭಾನುಸಾರ ನೀರು ಸರಬರಾಜು ಇಂಜಿನಿಯರ್‌ಅಥವಾ ಸ್ಯಾನಿಟರಿ ಇಂಜಿನಿಯರನು ಅಥವಾ ಈ ಅಧಿನಿಯಮ ಅಥವಾ ಅದರ ಮೇರೆಗೆ ರಚಿಸಿದ ನಿಯಮಗಳು ಅಥವಾ ವಿನಿಯಮಗಳ ಮೇರೆಗೆ ಅದನ್ನು ಕೊಡಲು ಶಕ್ತಗೊಳಿಸಿರುವ ಅಧಿಕಾರಿಯು ರುಜುಮಾಡತಕ್ಕದು ಮತ್ತು ಈ ಅಧಿನಿಯಮದ ಯಾವುದೇ ಇತರ ಉಪಬಂಧ ಅಥವಾ ಅದರ ಮೇರೆಗೆ ರಚಿಸಿದ ಯಾವುದೇ ನಿಯಮದ ಯಾವುದೇ ಉಪಬಂಧದ ಮೇರೆಗೆ ನಿರ್ದಿಷ್ಟಪಡಿಸಬೇಕೆಂದು ಅಗತ್ಯಪಡಿಸಿದ ಯಾವುದೇ ಇತರ ವಿಷಯದ ಜೊತೆಗೆ,-

(ಎ) ಅದನ್ನು ಕೊಡುವ ದಿನಾಂಕ;

(ಬಿ) ಅದನ್ನು ಕೊಟ್ಟಿರುವಂಥ ಉದ್ದೇಶ ಮತ್ತು ಅವಧಿ (ಯಾವುದಾದರೂ ಇದ್ದರೆ ಅದು);

(ಸಿ) ಯಾವುದಕ್ಕೆ ಒಳಪಟ್ಟು ಅದನ್ನು ಕೊಡಲಾಗಿದೆಯೋ ಆ ಪರಿಬಂಧಗಳು ಮತ್ತು ಷರತ್ತುಗಳು ಯಾವುದಾದರೂ ಇದ್ದರೆ ಅವು;

(ಡಿ) ಅದನ್ನು ಕೊಟ್ಟಿರುವ ವ್ಯಕ್ತಿಯ ಹೆಸರು ಮತ್ತು ವಿಳಾಸ;

(ಇ) ಆ ಲೈಸೆನ್ಸು ಅಥವಾ ಬರಹದಲ್ಲಿನ ಅನುಮತಿಗಾಗಿ ಸಂದಾಯ ಮಾಡಿದ ಫೀಜು ಯಾವುದಾದರೂ ಇದ್ದರೆ ಅದು

- ಇವುಗಳನ್ನು ನಿರ್ದಿಷ್ಟಪಡಿಸತಕ್ಕದು.

(2) ಈ ಅಧಿನಿಯಮ ಅಥವಾ ಅದರ ಮೇರೆಗೆ ರಚಿಸಿದ ಯಾವುದೇ ನಿಯಮ ಅಥವಾ ವಿನಿಯಮದಲ್ಲಿ ಅನ್ಯಥಾ ಉಪಬಂಧಿಸಿದಂತೆ ಹೊರತು, ಪ್ರತಿಯೊಂದು ಅಂಥ ಲೈಸೆನ್ಸು ಅಥವಾ ಬರಹದಲ್ಲಿನ ಅನುಮತಿಗಾಗಿ ಮಂಡಲಿಯು ಕಾಲಕಾಲಕ್ಕೆ ನಿಗದಿಪಡಿಸಬಹುದಾದಂಥ ದರದಲ್ಲಿ ಫೀಜನ್ನು ವಿಧಿಸಬಹುದು ಮತ್ತು ಅಂಥ ಫೀಜನ್ನು, ಯಾರಿಗೆ ಆ ಲೈಸೆನ್ಸು ಅಥವಾ ಬರಹದಲ್ಲಿನ ಅನುಮತಿಯನ್ನು ಕೊಡಲಾಗಿದೆಯೋ ಆ ವ್ಯಕ್ತಿಯು ಸಂದಾಯ ಮಾಡತಕ್ಕದು.

(3) ಈ ಅಧಿನಿಯಮ ಅಥವಾ ಅದರ ಮೇರೆಗೆ ರಚಿಸಿದ ಯಾವುದೇ ನಿಯಮ ಅಥವಾ ವಿನಿಯಮದಲ್ಲಿ ಅನ್ಯಥಾ ಉಪಬಂಧಿಸಿದಂತೆ ಹೊರತು, ಈ ಅಧಿನಿಯಮ ಅಥವಾ ಅದರ ಮೇರೆಗೆ ರಚಿಸಿದ ಅಥವಾ ಯಾವುದೇ ನಿಯಮ ಅಥವಾ ವಿನಿಯಮದ ಮೇರೆಗೆ ಕೊಟ್ಟಿರುವ ಯಾವುದೇ ಲೈಸೆನ್ಸು ಅಥವಾ ಬರಹದಲ್ಲಿನ ಅನುಮತಿಯನ್ನು ಯಾವುದೇ ಕಾಲದಲ್ಲಿ ಮಂಡಳಿಯು ಅಥವಾ ಅದನ್ನು ಕೊಟ್ಟಿರುವ ಅಧಿಕಾರಿಯು, ಅದನ್ನು ತಪ್ಪು ನಿರೂಪಣೆ ಅಥವಾ ಮೋಸದಿಂದ ಪಡೆದುಕೊಂಡಿದ್ದಾನೆ ಎಂದು ಅದಕ್ಕೆ ಅಥವಾ ಅವನಿಗೆ ಮನದಟ್ಟಾದರೆ, ಅಥವಾ ಅದರ ಯಾವುದೇ ಪರಿಬಂಧ ಅಥವಾ ಷರತ್ತನ್ನು ಪಡೆದುಕೊಂಡವನು ಅದನ್ನು ಉಲ್ಲಂಘಿಸಿದ್ದರೆ ಅಥವಾ ಅದನ್ನು ಪಾಲಿಸಲು ತಪ್ಪಿದ್ದರೆ ಅಥವಾ ಯಾವುದಕ್ಕಾಗಿ ಲೈಸೆನ್ಸ್ ಅಥವಾ ಅನುಮತಿಯನ್ನು ಕೊಡಲಾಗಿದೆಯೋ ಆ ಯಾವುದೇ ವಿಷಯಕ್ಕೆ ಸಂಬಂಧಪಟ್ಟ ಈ ಅಧಿನಿಯಮದ ಯಾವುದೇ ಉಪಬಂಧ ಅಥವಾ ಅದರ ಮೇರೆಗೆ ರಚಿಸಿದ ಯಾವುದೇ ನಿಯಮ ಅಥವಾ ವಿನಿಯಮದ ಉಲ್ಲಂಘನೆಗಾಗಿ ಪಡೆದುಕೊಂಡವನು ಅಪರಾಧಿ ಎಂದು ನಿರ್ಣೀತನಾಗಿದ್ದರೆ, ಅಮಾನತ್ತಿನಲ್ಲಿಡಬಹುದು ಅಥವಾ ರದ್ದುಗೊಳಿಸಬಹುದು:

1. 1966ರ ಅಧಿನಿಯಮ ಸಂಖ್ಯೆ 6ರ ಮೂಲಕ 17.3.1966 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
2. 1966ರ ಅಧಿನಿಯಮ ಸಂಖ್ಯೆ 6ರ ಮೂಲಕ 17.3.1966 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

ಪರಂತು,-

(ಎ) ಅಮಾನತ್ತು ಅಥವಾ ರದ್ದಿಯಾತಿಯ ಯಾವುದೇ ಆದೇಶವನ್ನು ಮಾಡುವುದಕ್ಕೆ ಮುಂಚೆ ಅದನ್ನು ಏಕೆ ಅಮಾನತ್ತುಗೊಳಿಸಬಾರದು ಅಥವಾ ರದ್ದುಗೊಳಿಸಬಾರದು ಎಂಬ ಬಗ್ಗೆ ಕಾರಣವನ್ನು ತೋರಿಸಲು ಆ ಲೈಸೆನ್ಸನ್ನು ಅಥವಾ ಬರಹದಲ್ಲಿನ ಅನುಮತಿಯನ್ನು ಪಡೆದವನಿಗೆ ಮುಕ್ತ ಅವಕಾಶವನ್ನು ಕೊಡತಕ್ಕುದು;

(ಬಿ) ಅಂಥ ಪ್ರತಿಯೊಂದು ಆದೇಶವು, ಆ ಲೈಸೆನ್ಸು ಅಥವಾ ಬರಹದಲ್ಲಿನ ಅನುಮತಿಯ ಅಮಾನತ್ತು ಅಥವಾ ರದ್ದಿಯಾತಿಗಾಗಿನ ಕಾರಣಗಳ ಬಗ್ಗೆ ಸಂಕ್ಷಿಪ್ತ ನಿರೂಪಣೆಯನ್ನು ಒಳಗೊಂಡಿರತಕ್ಕುದು.

(4) ಅಂಥ ಯಾವುದೇ ಲೈಸೆನ್ಸು ಅಥವಾ ಬರಹದಲ್ಲಿನ ಅನುಮತಿಯನ್ನು ಅಮಾನತುಗೊಳಿಸಿದಾಗ ಅಥವಾ ರದ್ದುಗೊಳಿಸಿದಾಗ ಅಥವಾ ಯಾವ ಅವಧಿಗಾಗಿ ಅದನ್ನು ಕೊಡಲಾಗಿದ್ದಿತೋ ಆ ಅವಧಿಯು ಮುಕ್ತಾಯಗೊಂಡಿರುವಾಗ ಪಡೆದುಕೊಂಡವನು ಈ ಅಧಿನಿಯಮ ಅಥವಾ ಅದರ ಮೇರೆಗೆ ರಚಿಸಿದ ಯಾವುದೇ ನಿಯಮದ ಎಲ್ಲಾ ಉದ್ದೇಶಗಳಿಗಾಗಿ, ಆ ಲೈಸೆನ್ಸು ಅಥವಾ ಬರಹದಲ್ಲಿನ ಅನುಮತಿಯನ್ನು ಅಮಾನತುಗೊಳಿಸುವ ಅಥವಾ ರದ್ದುಗೊಳಿಸುವ ಆದೇಶವನ್ನು, ರದ್ದುಗೊಳಿಸುವಂಥ ಕಾಲದವರೆಗೆ ಅಥವಾ ಆ ಲೈಸೆನ್ಸು ಅಥವಾ ಬರಹದಲ್ಲಿನ ಅನುಮತಿಯನ್ನು ನವೀಕರಿಸುವವರೆಗೆ, ಲೈಸೆನ್ಸು ಅಥವಾ ಬರಹದಲ್ಲಿನ ಅನುಮತಿಯನ್ನು ಹೊಂದಿಲ್ಲ ಎಂಬುದಾಗಿ ಭಾವಿಸತಕ್ಕುದು.

(5) ಈ ಅಧಿನಿಯಮದ ಮೇರೆಗೆ ಕೊಟ್ಟಿರುವ ಯಾವುದೇ ಲೈಸೆನ್ಸು ಅಥವಾ ಬರಹದಲ್ಲಿನ ಅನುಮತಿಯನ್ನು ಪಡೆದುಕೊಂಡಿರುವ ಪ್ರತಿಯೊಬ್ಬನು ಎಲ್ಲಾ ಯುಕ್ತ ಕಾಲಗಳಲ್ಲಿ ಅಂಥ ಲೈಸೆನ್ಸು ಅಥವಾ ಬರಹದಲ್ಲಿನ ಅನುಮತಿಯು ಜಾರಿಯಲ್ಲಿರುವಾಗ, ಆ ಮಂಡಳಿ ಅಥವಾ ಅದನ್ನು ಕೊಟ್ಟಿರುವ ಪ್ರಾಧಿಕಾರವು ಹಾಗೆ ಅಗತ್ಯಪಡಿಸಿದರೆ, ಅಂಥ ಲೈಸೆನ್ಸು ಅಥವಾ ಬರಹದಲ್ಲಿನ ಅನುಮತಿಯನ್ನು ಹಾಜರುಪಡಿಸತಕ್ಕುದು.

**91. ಪ್ರವೇಶ ಮತ್ತು ಪರಿಶೀಲನೆಯ ಅಧಿಕಾರಗಳು :-** ಮುಖ್ಯ ಇಂಜಿನಿಯರನು, ನೀರು ಸರಬರಾಜು ಇಂಜಿನಿಯರನು, ಸ್ಯಾನಿಟರಿ ಇಂಜಿನಿಯರನು ಅಥವಾ ಈ ಬಗ್ಗೆ ಮಂಡಳಿಯು ಅಧಿಕೃತಗೊಳಿಸಿದ ಅಥವಾ ಈ ಬಗ್ಗೆ ಈ ಅಧಿನಿಯಮದ ಉಪಬಂಧಗಳ ಮೂಲಕ ಅಥವಾ ಅವುಗಳ ಮೇರೆಗೆ ಶಕ್ತಗೊಳಿಸಲಾಗಿರುವ ಯಾವನೇ ಅಧಿಕಾರಿಯು, ಸಹಾಯಕರು ಮತ್ತು ಕೆಲಸಗಾರರೊಂದಿಗೆ ಅಥವಾ ಅವರಿಲ್ಲದೆಯೇ,-

(ಎ) ಆ ಭೂಮಿ ಅಥವಾ ಕಟ್ಟಡದ ಬಗ್ಗೆ ಅಥವಾ ಅದಕ್ಕೆ ಸಂಬಂಧಿಸಿದಂತೆ ಈ ಅಧಿನಿಯಮದ ಉಪಬಂಧಗಳು ಅಥವಾ ಅದರ ಮೇರೆಗೆ ರಚಿಸಿರುವ ಯಾವುದೇ ನಿಯಮ ಅಥವಾ ವಿನಿಯಮದ ಯಾವುದೇ ಉಲ್ಲಂಘನೆಯಾಗಿದೆಯೋ ಅಥವಾ ಆಗಿದ್ದಿತೇ ಹೇಗೆ ಎಂಬುದನ್ನು ಖಚಿತಪಡಿಸಿಕೊಳ್ಳುವ ಉದ್ದೇಶಕ್ಕಾಗಿ;

(ಬಿ) ಈ ಅಧಿನಿಯಮ ಅಥವಾ ಅದರ ಮೇರೆಗೆ ರಚಿಸಿದ ಯಾವುದೇ ನಿಯಮ ಅಥವಾ ವಿನಿಯಮದ ಮೇರೆಗೆ ಕ್ರಮವನ್ನು ಕೈಗೊಳ್ಳಲು ಅಥವಾ ಯಾವುದೇ ಕಾಮಗಾರಿಯನ್ನು ನಿರ್ವಹಿಸಲು ಮಂಡಲಿಯನ್ನು ಅಥವಾ ಈ ಬಗ್ಗೆ ಅಧಿಕೃತಗೊಳಿಸಲಾಗಿರುವ ಅಥವಾ ಶಕ್ತಗೊಳಿಸಲಾಗಿರುವ ಯಾವನೇ ಅಧಿಕಾರಿಯನ್ನು ಅಧಿಕೃತಗೊಳಿಸುವ ಅಥವಾ ಅಗತ್ಯಪಡಿಸುವಂಥ ಸಂದರ್ಭಗಳು ಇವೆಯೋ ಅಥವಾ ಇಲ್ಲವೋ ಎಂಬುದನ್ನು ಖಚಿತಪಡಿಸಿಕೊಳ್ಳುವ ಉದ್ದೇಶಕ್ಕಾಗಿ;

(ಸಿ) ಈ ಅಧಿನಿಯಮ ಅಥವಾ ಅದರ ಮೇರೆಗೆ ರಚಿಸಿದ ಯಾವುದೇ ನಿಯಮ ಅಥವಾ ವಿನಿಯಮದ ಮೂಲಕ ಅಧಿಕೃತಗೊಳಿಸಲಾದ ಅಥವಾ ಅಗತ್ಯಪಡಿಸಲಾದ ಯಾವುದೇ ಕ್ರಮವನ್ನು ಕೈಗೊಳ್ಳುವ ಅಥವಾ ಯಾವುದೇ ಕಾಮಗಾರಿಯನ್ನು ನಿರ್ವಹಿಸುವ ಉದ್ದೇಶಕ್ಕಾಗಿ;

(ಡಿ) ಈ ಅಧಿನಿಯಮದ ಮೂಲಕ ಅಥವಾ ಅದರ ಮೇರೆಗೆ ಅಧಿಕೃತಗೊಳಿಸಿದ ಅಥವಾ ಅಗತ್ಯಪಡಿಸಿದ ಅಥವಾ ಈ ಅಧಿನಿಯಮದ ಯುಕ್ತ ಆಡಳಿತಕ್ಕಾಗಿ ಅವಶ್ಯವಾದ ಯಾವುದೇ ವಿಚಾರಣೆ, ಪರಿಶೀಲನೆ, ಪರೀಕ್ಷೆ, ಅಳತೆ, ಮೌಲ್ಯ ನಿರ್ಧರಣೆ ಅಥವಾ ಸಮೀಕ್ಷೆಯನ್ನು ನಡೆಸಲು;

(ಇ) ಈ ಅಧಿನಿಯಮದ ಅಥವಾ ಅದರ ಮೇರೆಗೆ ರಚಿಸಿದ ಯಾವುದೇ ನಿಯಮ ಅಥವಾ ವಿನಿಯಮದ ಮೇರೆಗೆ ಮಂಡಳಿಯ ಯಾವನೇ ಅಧಿಕಾರಿಯು ಸಾಮಾನ್ಯವಾಗಿ ಪ್ರಕಾರ್ಯಗಳನ್ನು ಸಮರ್ಥವಾಗಿ ನಿರ್ವಹಿಸುವ ಉದ್ದೇಶಕ್ಕಾಗಿ

- ಯಾವುದೇ ಭೂಮಿ ಅಥವಾ ಕಟ್ಟಡದೊಳಗೆ ಅಥವಾ ಅದರ ಮೇಲೆ ಪ್ರವೇಶಿಸಬಹುದು.

**92. ಯಾವುದೇ ಕಾಮಗಾರಿಗೆ ಸಂಬಂಧಪಟ್ಟಂತೆ ಭೂಮಿಗೆ ಲಗತ್ತಾಗಿರುವ ಭೂಮಿಯನ್ನು ಪ್ರವೇಶಿಸಲು ಅಧಿಕಾರ :-** (1) ಮುಖ್ಯ ಇಂಜಿನಿಯರನು, ನೀರು ಸರಬರಾಜು ಇಂಜಿನಿಯರನು, ಸ್ಯಾನಿಟರಿ ಇಂಜಿನಿಯರನು ಅಥವಾ ಈ ಬಗ್ಗೆ ಮಂಡಳಿಯು ಅಧಿಕೃತಗೊಳಿಸಿದ ಅಥವಾ ಈ ಅಧಿನಿಯಮದ ಯಾವುದೇ ಉಪಬಂಧದ ಮೂಲಕ ಅಥವಾ ಅದರ ಮೇರೆಗೆ ಈ ಬಗ್ಗೆ ಶಕ್ತಗೊಳಿಸಲಾಗಿರುವ ಯಾವನೇ ಅಧಿಕಾರಿಯು ಈ ಅಧಿನಿಯಮದ ಮೂಲಕ ಅಥವಾ ಅದರ ಮೇರೆಗೆ ಅಧಿಕೃತಗೊಳಿಸಲಾಗಿರುವ ಯಾವುದೇ ಕಾಮಗಾರಿಯಿಂದ ಐವತ್ತು ಮೀಟರುಗಳೊಳಗಿನ ಯಾವುದೇ ಭೂಮಿಯ ಮೇಲೆ ಸಹಾಯಕರು ಅಥವಾ ಕೆಲಸಗಾರರೊಂದಿಗೆ ಅಥವಾ ಅವರಿಲ್ಲದೆ ಅದರ ಮೇಲೆ ಯಾವುದೇ ಮಣ್ಣು, ಕಂಕರು, ಕಲ್ಲು ಅಥವಾ ಇತರ ಸಾಮಗ್ರಿಗಳನ್ನು ಹಾಕುವ ಉದ್ದೇಶಕ್ಕಾಗಿ ಅಥವಾ ಅಂಥ ಕಾಮಗಾರಿಗೆ ಪ್ರವೇಶಾವಕಾಶವನ್ನು ಪಡೆಯುವುದಕ್ಕಾಗಿ ಅಥವಾ ಅದರ ನಿರ್ವಹಣೆಗೆ ಸಂಬಂಧಿಸಿದ ಯಾವುದೇ ಇತರ ಉದ್ದೇಶಗಳಿಗಾಗಿ ಪ್ರವೇಶಿಸಬಹುದು.

(2) ಹಾಗೆ ಅಧಿಕೃತಗೊಳಿಸಲಾಗಿರುವ ವ್ಯಕ್ತಿಯು ಅಂಥ ಯಾವುದೇ ಭೂಮಿಯ ಮೇಲೆ ಪ್ರವೇಶಿಸುವುದಕ್ಕೆ ಮುಂಚೆ, ಅದರ ಉದ್ದೇಶವನ್ನು ತಿಳಿಸತಕ್ಕುದು; ಮತ್ತು ಅದರ ಒಡೆಯ ಅಥವಾ ಅಧಿಭೋಗದಾರನು ಹಾಗೆ ಅಗತ್ಯಪಡಿಸಿದರೆ, ಅಂಥ ಉದ್ದೇಶಕ್ಕಾಗಿ ಅಗತ್ಯವಾಗಬಹುದಾದಷ್ಟರಮಟ್ಟಿಗೆ ಆ ಭೂಮಿಗೆ ಬೇಲಿಯನ್ನು ಹಾಕತಕ್ಕುದು.

(3) ಹಾಗೆ ಅಧಿಕೃತಗೊಳಿಸಲಾಗಿರುವ ವ್ಯಕ್ತಿಯು, ಈ ಪ್ರಕರಣದ ಮೂಲಕ ಪ್ರದಾನ ಮಾಡಲಾಗಿರುವ ಯಾವುದೇ ಅಧಿಕಾರವನ್ನು ಚಲಾಯಿಸುವಲ್ಲಿ ಸಾಧ್ಯವಾಗಬಹುದಾದಷ್ಟು ಕಡಿಮೆ ಹಾನಿಯನ್ನು ಉಂಟುಮಾಡತಕ್ಕುದು ಮತ್ತು ಖಾಯಂ ಆಗಿರಲಿ ಅಥವಾ ತಾತ್ಕಾಲಿಕವಾದುದಾಗಿರಲಿ ಯಾವುದೇ ಅಂಥ ಹಾನಿಗಾಗಿ ಅಂಥ ಭೂಮಿಯ ಒಡೆಯ ಅಥವಾ ಅಧಿಭೋಗದಾರನಿಗೆ ಅಥವಾ ಅವರಿಬ್ಬರಿಗೂ ಈ ಬಗ್ಗೆ ರಚಿಸಿರುವ ವಿನಿಯಮಗಳಿಗನುಸಾರವಾಗಿ ಮಂಡಳಿಯು ಪರಿಹಾರ ಧನವನ್ನು ಸಂದಾಯ ಮಾಡತಕ್ಕುದು.

**93. ಕಟ್ಟಡಗಳೊಳಕ್ಕೆ ಬಲಾತ್ಕಾರ ಪ್ರವೇಶ :-** (1) ಮುಖ್ಯ ಇಂಜಿನಿಯರನು, ನೀರು ಸರಬರಾಜು ಇಂಜಿನಿಯರನು, ಸ್ಯಾನಿಟರಿ ಇಂಜಿನಿಯರನು ಅಥವಾ ಮಂಡಲಿಯು ಈ ಬಗ್ಗೆ ಅಧಿಕೃತಗೊಳಿಸಿದ ಅಥವಾ ಈ ಅಧಿನಿಯಮದ ಯಾವುದೇ ಉಪಬಂಧದ ಮೂಲಕ ಅಥವಾ ಅದರ ಮೇರೆಗೆ ಈ ಬಗ್ಗೆ ಶಕ್ತಗೊಳಿಸಲಾದ ಯಾವನೇ ಅಧಿಕಾರಿಗೆ, -

(ಎ) ಅಂಥ ಪ್ರವೇಶದ ಉದ್ದೇಶಕ್ಕಾಗಿ ಯಾವುದೇ ಬಾಗಿಲು, ಗೇಟು ಅಥವಾ ಇತರ ಅಡ್ಡಿಯನ್ನು ತೆರೆಯುವುದು ಅವಶ್ಯವೆಂದು ಅವನು ಪರ್ಯಾಲೋಚಿಸಿದರೆ; ಮತ್ತು

(ಬಿ) ಆ ಒಡೆಯ ಅಥವಾ ಅಧಿಭೋಗದಾರನು ಗೈರು ಹಾಜರಿದ್ದರೆ ಅಥವಾ ಹಾಜರಿದ್ದು ಅಂಥ ಬಾಗಿಲು, ಗೇಟು ಅಥವಾ ಅಡ್ಡಿಯನ್ನು ತೆರೆಯಲು ನಿರಾಕರಿಸಿದರೆ

- ಯಾವುದೇ ಸ್ಥಳದಲ್ಲಿ ಯಾವುದೇ ಪ್ರವೇಶ ಮಾಡುವುದು ಮತ್ತು ಅವುಗಳನ್ನು ತೆರೆಯುವುದು ಅಥವಾ ತೆರೆಯುವಂತೆ ಮಾಡುವುದು ಕಾನೂನು ಸಮ್ಮತವಾಗಿರತಕ್ಕುದು.

(2) ಅಂಥ ಯಾವುದೇ ಸ್ಥಳದಲ್ಲಿ ಯಾವುದೇ ಪ್ರವೇಶವನ್ನು ಮಾಡುವುದಕ್ಕೆ ಅಂಥ ಯಾವುದೇ ಬಾಗಿಲು, ಗೇಟು ಅಥವಾ ಇತರ ಅಡ್ಡಿಯನ್ನು ತೆರೆಯುವುದಕ್ಕೆ ಅಥವಾ ತೆರೆಯುವಂತೆ ಮಾಡುವುದಕ್ಕೆ ಮುಂಚೆ ಮುಖ್ಯ ಇಂಜಿನಿಯರನು, ನೀರು ಸರಬರಾಜು ಇಂಜಿನಿಯರನು, ಸ್ಯಾನಿಟರಿ ಇಂಜಿನಿಯರನು ಅಥವಾ ಈ ಬಗ್ಗೆ ಅಧಿಕೃತಗೊಳಿಸಲಾಗಿರುವ ಅಥವಾ ಶಕ್ತಗೊಳಿಸಲಾಗಿರುವ ವ್ಯಕ್ತಿಯು, ಪ್ರವೇಶಿಸಬೇಕಾದ ಜಾಗವು ಇರುವಂಥ ಸ್ಥಳದ ಇಬ್ಬರು ಅಥವಾ ಅದಕ್ಕಿಂತ ಹೆಚ್ಚಿನ ಗೌರವಾನ್ವಿತ ನಿವಾಸಿಗಳನ್ನು, ಆ ಪ್ರವೇಶವನ್ನು ಅಥವಾ ತೆರೆಯುವುದನ್ನು ನೋಡಲು ಕರೆಯತಕ್ಕುದು ಮತ್ತು ಹಾಗೆ ಮಾಡಲು ಅವರಿಗೆ ಅಥವಾ ಅವರಲ್ಲಿ ಒಬ್ಬನಿಗೆ ಬರಹದಲ್ಲಿನ ಆದೇಶವನ್ನು ಕೊಡಬಹುದು.

(3) ಈ ಪ್ರಕರಣದ ಮೇರೆಗೆ, ಯಾವುದೇ ಸ್ಥಳದಲ್ಲಿ ಯಾವುದೇ ಪ್ರವೇಶವನ್ನು ಮಾಡಿದ ತರುವಾಯ ಅಥವಾ ಯಾವುದೇ ಬಾಗಿಲು, ಗೇಟು ಅಥವಾ ಇತರ ಅಡ್ಡಿಯನ್ನು ತೆರೆದ ತರುವಾಯ ಅದಷ್ಟು ಬೇಗ ಮಂಡಳಿಗೆ ವರದಿಯನ್ನು ಒಪ್ಪಿಸತಕ್ಕುದು.

**94. ಪ್ರವೇಶಿಸುವ ಕಾಲ:-** ಈ ಅಧಿನಿಯಮ ಅಥವಾ ಅದರ ಮೇರೆಗೆ ರಚಿಸಿದ ಯಾವುದೇ ವಿನಿಯಮದಲ್ಲಿ ಅನ್ಯಥಾ ಉಪಬಂಧಿಸಿರುವಂತೆ ಹೊರತು, ಈ ಅಧಿನಿಯಮದ ಮೂಲಕ ಅಥವಾ ಅದರ ಮೇರೆಗೆ ಅಧಿಕೃತಗೊಳಿಸಿದ ಯಾವುದೇ ಪ್ರವೇಶವನ್ನು ಸೂರ್ಯೋದಯ ಮತ್ತು ಸೂರ್ಯಾಸ್ತದ ನಡುವಣ ವೇಳೆಗಳಲ್ಲಿ ಹೊರತು ಮಾಡತಕ್ಕುದಲ್ಲ.

**95. ಸಾಮಾನ್ಯವಾಗಿ ಸಮ್ಮತಿಯನ್ನು ಪಡೆದುಕೊಳ್ಳತಕ್ಕುದು :-** ಈ ಅಧಿನಿಯಮ ಅಥವಾ ಅದರ ಮೇರೆಗೆ ರಚಿಸಿದ ಯಾವುದೇ ವಿನಿಯಮದಲ್ಲಿ ಅನ್ಯಥಾ ಉಪಬಂಧಿಸಿರುವಂತೆ ಹೊರತು, ಯಾವುದೇ ಭೂಮಿ ಅಥವಾ ಕಟ್ಟಡದ ಮೇಲೆ ಅಥವಾ ಅದರ ಒಳಕ್ಕೆ ಯಾವುದೇ ಪ್ರವೇಶವನ್ನು ಆ ಅಧಿಬೋಗದಾರನ ಸಮ್ಮತಿ ಇಲ್ಲದೆ ಅಥವಾ ಅಧಿಬೋಗದಾರನು ಇಲ್ಲದಿದ್ದರೆ, ಅದರ ಒಡೆಯನ ಸಮ್ಮತಿ ಇಲ್ಲದೆ ಮಾಡತಕ್ಕುದಲ್ಲ ಮತ್ತು ಯಾವುದೇ ಅಂಥ ಪ್ರವೇಶವನ್ನು ಸಂದರ್ಭಾನುಸಾರ ಸದರಿ ಒಡೆಯ ಅಥವಾ ಅಧಿಬೋಗದಾರನಿಗೆ ಅಂಥ ಪ್ರವೇಶವನ್ನು ಮಾಡುವ ಉದ್ದೇಶದ ಬಗ್ಗೆ ಇಪ್ಪತ್ತು ನಾಲ್ಕು ಗಂಟೆಗಳಿಗಿಂತ ಕಡಿಮೆ ಇಲ್ಲದ ಬರಹದಲ್ಲಿನ ನೋಟೀಸನ್ನು ಕೊಡದೆ ಮಾಡತಕ್ಕುದಲ್ಲ.

**96. ಸಾಮಾಜಿಕ ಅಥವಾ ಧಾರ್ಮಿಕ ಆಚರಣೆಗಳ ಬಗ್ಗೆ ಯುಕ್ತ ಗೌರವವನ್ನು ಹೊಂದಿರತಕ್ಕುದು:-** ಮಾನವ ವಸತಿ ಎಂದು ಉಪಯೋಗಿಸುವ ಯಾವುದೇ ಸ್ಥಳವನ್ನು ಈ ಅಧಿನಿಯಮದ ಮೇರೆಗೆ ಪ್ರವೇಶಿಸಿದಾಗ ಪ್ರವೇಶಿಸಿದ ಸ್ಥಳದ ಅಧಿಭೋಗದಾರರ, ಸಾಮಾಜಿಕ ಮತ್ತು ಧಾರ್ಮಿಕ ರೂಢಿಗಳು ಮತ್ತು ಆಚರಣೆಗಳಿಗೆ ಯುಕ್ತ ಗೌರವವನ್ನು ಕೊಡತಕ್ಕುದು ಮತ್ತು ಮಹಿಳೆಯ ವಾಸ್ತವಿಕ ಅಧಿಭೋಗದಲ್ಲಿರುವ ಯಾವುದೇ ಕೊಠಡಿಯನ್ನು ಅವಳು ಅಲ್ಲಿಂದ ಹಿಂತೆಗೆಯಲು ಸ್ವತಂತ್ರಳಾಗಿರುವಳೆಂದು ಅವಳಿಗೆ ತಿಳಿಸುವವರೆಗೆ ಮತ್ತು ಹಿಂತೆಗೆಯಲು ಅವಳಿಗೆ ಪ್ರತಿಯೊಂದು ಯುಕ್ತ ಸೌಲಭ್ಯವನ್ನು ಕೊಡುವವರೆಗೆ ಪ್ರವೇಶಿಸತಕ್ಕುದಲ್ಲ ಅಥವಾ ಅದನ್ನು ಒಡೆದು ತೆರೆಯತಕ್ಕುದಲ್ಲ.

**97. ಕಾಮಗಾರಿಯನ್ನು ನಿರ್ವಹಿಸುವಲ್ಲಿ ನಿಷೇಧ ಅಥವಾ ಅಡ್ಡಿ ಅಥವಾ ಪೀಡಿಸುವಿಕೆ:-** ಈ ಅಧಿನಿಯಮದ ಯಾವುದೇ ಉಪಬಂಧ ಅಥವಾ ಅದರ ಮೇರೆಗೆ ರಚಿಸಿದ ಯಾವುದೇ ನಿಯಮ ಅಥವಾ ವಿನಿಯಮದ ಕಾರಣದಿಂದಾಗಿ ಅಥವಾ ಅದರ ಪರಿಣಾಮದಿಂದಾಗಿ ಅವನನ್ನು ಅಧಿಕೃತಗೊಳಿಸಿದ ಅಥವಾ ಶಕ್ತಗೊಳಿಸಿದ ಅಥವಾ ಮಾಡಲು ಅಗತ್ಯಪಡಿಸಿರುವಂಥ ಅವನ ಕರ್ತವ್ಯ ಅಥವಾ ಯಾವುದೇ ಕಾರ್ಯದ ನಿರ್ವಹಣೆಯಲ್ಲಿ ಈ ಅಧಿನಿಯಮದ ಮೂಲಕ ಅಥವಾ ಅದರ ಮೇರೆಗೆ ಅಧಿಕೃತಗೊಳಿಸಿದ ಅಥವಾ ಶಕ್ತಗೊಳಿಸಿದ ಯಾವನೇ ವ್ಯಕ್ತಿಯನ್ನು ಯಾವನೇ ವ್ಯಕ್ತಿಯು ಅಡ್ಡಿಪಡಿಸತಕ್ಕುದಲ್ಲ ಅಥವಾ ಪೀಡಿಸತಕ್ಕುದಲ್ಲ.

**98. ನೋಟೀಸು ಇತ್ಯಾದಿಗಳು ಯುಕ್ತ ಕಾಲವನ್ನು ನಿಗದಿಪಡಿಸತಕ್ಕುದು :-** ಈ ಅಧಿನಿಯಮದ ಅಥವಾ ಅದರ ಮೇರೆಗೆ ರಚಿಸಿದ ಯಾವುದೇ ನಿಯಮ ಅಥವಾ ವಿನಿಯಮದ ಮೇರೆಗೆ ಹೊರಡಿಸಿದ ಅಥವಾ ಮಾಡಿದ ಯಾವುದೇ ನೋಟೀಸು, ಬಿಲ್ಲು, ಆದೇಶ ಅಥವಾ ಕಡ್ಡಾಯ ಕೋರಿಕೆಯು ಯಾವುದನ್ನಾದರೂ ಮಾಡಲು ಅಗತ್ಯಪಡಿಸಿರುವಲ್ಲಿ, ಯಾವುದನ್ನು ಮಾಡುವುದಕ್ಕಾಗಿ ಈ ಅಧಿನಿಯಮದ ಅಥವಾ ಅದರ ಮೇರೆಗೆ ರಚಿಸಿದ ನಿಯಮ ಅಥವಾ ವಿನಿಯಮದಲ್ಲಿ ಯಾವುದೇ ಕಾಲವನ್ನು ನಿಗದಿಪಡಿಸಿಲ್ಲವೋ ಅದನ್ನು ಮಾಡುವುದಕ್ಕಾಗಿ ಆ ನೋಟೀಸು, ಬಿಲ್ಲು, ಆದೇಶ ಅಥವಾ ಕಡ್ಡಾಯ ಕೋರಿಕೆಯು ಯುಕ್ತ ಕಾಲವನ್ನು ನಿರ್ದಿಷ್ಟಪಡಿಸತಕ್ಕುದು.

**99. ನೋಟೀಸುಗಳು, ಇತ್ಯಾದಿಗಳ ಮೇಲಿನ ರುಜುವಿನ ಬಗ್ಗೆ ಮುದ್ರೆಯನ್ನು ಹಾಕಬಹುದು:-** (1) ನೀರು ಸರಬರಾಜು ಇಂಜಿನಿಯರ್ ಅಥವಾ ಸ್ಯಾನಿಟರಿ ಇಂಜಿನಿಯರ್ ಅಥವಾ ಹಾಗೆ ಮಾಡಲು ಅಧಿಕೃತಗೊಳಿಸಿದ ಅಥವಾ ಶಕ್ತಗೊಳಿಸಿದ ಯಾವುದೇ ಅಧಿಕಾರಿಯ ರುಜುವನ್ನು ಹೊಂದಿರಲು ಈ ಅಧಿನಿಯಮ ಅಥವಾ ಅದರ ಮೇರೆಗೆ ರಚಿಸಿದ ಯಾವುದೇ ನಿಯಮ ಅಥವಾ ವಿನಿಯಮಗಳ ಮೂಲಕ ಅಗತ್ಯಪಡಿಸಲಾಗಿರುವಂಥ ಪ್ರತಿಯೊಂದು ಲೈಸೆನ್ಸು, ಅದರಲ್ಲಿನ ಅನುಮತಿ, ನೋಟೀಸು, ಬಿಲ್ಲು, ಸಮನ್ನುಗಳು ಅಥವಾ ಇತರ ದಸ್ತಾವೇಜು ಅದರ ಮೇಲೆ ಯಾವನೇ ಅಂಥ ಅಧಿಕಾರಿಯ ರುಜುವಿನ ಪಡಿಯಚ್ಚನ್ನು ಅದು ಹೊಂದಿದ್ದರೆ, ಅದಕ್ಕೆ ಸರಿಯಾಗಿ ರುಜು ಮಾಡಿರುವುದಾಗಿ ಭಾವಿಸತಕ್ಕುದು.

(2) (1)ನೇ ಉಪಪ್ರಕರಣದಲ್ಲಿರುವುದ್ಯಾವುದೂ ಚೆಕ್ಕಿಗೆ ಅನ್ವಯವಾಗುವುದೆಂದು ಭಾವಿಸತಕ್ಕುದಲ್ಲ.

**100. ನೋಟೀಸುಗಳು, ಇತ್ಯಾದಿಗಳನ್ನು ಯಾರು ಜಾರಿಗೊಳಿಸಬೇಕು ಅಥವಾ ಕೊಡಬೇಕು ಎಂಬ ಬಗ್ಗೆ :-** ಯಾವನೇ ವ್ಯಕ್ತಿಗೆ ಜಾರಿಮಾಡಬೇಕೆಂದು ಅಥವಾ ಕೊಡಬೇಕೆಂದು ಈ ಅಧಿನಿಯಮದ ಅಥವಾ ಅದರ ಮೇರೆಗೆ ರಚಿಸಿದ ಯಾವುದೇ ನಿಯಮ ಅಥವಾ ಯಾವುದೇ ವಿನಿಯಮದ ಮೂಲಕ ಅಗತ್ಯಪಡಿಸಿರುವ ಎಲ್ಲಾ ನೋಟೀಸುಗಳು, ಬಿಲ್ಲುಗಳು, ಸಮನ್ನುಗಳು ಮತ್ತು ಇತರ ದಸ್ತಾವೇಜುಗಳನ್ನು, ಮಂಡಲಿಯು ಅಧಿಕೃತಗೊಳಿಸಬಹುದಾದಂಥ ವ್ಯಕ್ತಿಗಳು ಜಾರಿಗೊಳಿಸತಕ್ಕುದು ಅಥವಾ ಕೊಡತಕ್ಕುದು.

**101. ನೋಟೀಸುಗಳು, ಇತ್ಯಾದಿಗಳ ಜಾರಿ:-** (1) ಯಾವನೇ ವ್ಯಕ್ತಿಗೆ ಜಾರಿಗೊಳಿಸಬೇಕೆಂದು ಅಥವಾ ಕೊಡಬೇಕೆಂದು ಈ ಅಧಿನಿಯಮ ಅಥವಾ ಅದರ ಮೇರೆಗೆ ರಚಿಸಿದ ಯಾವುದೇ ನಿಯಮ ಅಥವಾ ವಿನಿಯಮದ ಮೂಲಕ ಅಗತ್ಯಪಡಿಸಿರುವ ಅಥವಾ ಅಧಿಕೃತಗೊಳಿಸಿರುವ ಪ್ರತಿಯೊಂದು ನೋಟೀಸು, ಬಿಲ್ಲು, ಸಮನುಗಳು, ಆದೇಶ, ಕಡ್ಡಾಯ ಕೋರಿಕೆ ಅಥವಾ ಇತರ ದಸ್ತಾವೇಜನ್ನು ಈ ಅಧಿನಿಯಮ ಅಥವಾ ಅಂಥ ನಿಯಮ ಅಥವಾ ವಿನಿಯಮದಲ್ಲಿ ಅನ್ಯಥಾ ಉಪಬಂಧಿಸಿರುವಂತೆ ಹೊರತು,-

(ಎ) ಜಾರಿಗೊಳಿಸಬೇಕಾದ ವ್ಯಕ್ತಿಯು ಕಂಪನಿಯಾಗಿರುವಲ್ಲಿ, ಆ ದಸ್ತಾವೇಜನ್ನು ಅದರ ನೋಂದಾಯಿತ ಕಚೇರಿ ಅಥವಾ ಅದರ ಪ್ರಧಾನ ಕಚೇರಿಯಲ್ಲಿ ವ್ಯವಹಾರದ ಸ್ಥಳದಲ್ಲಿ ಕಂಪನಿಯ ಕಾರ್ಯದರ್ಶಿಗೆ ವಿಳಾಸಿಸಿದ್ದರೆ; ಮತ್ತು

(i) ನೋಂದಾಯಿತ ಅಂಚೆ ಮೂಲಕ ಕಳುಹಿಸಿದ್ದರೆ; ಅಥವಾ

(ii) ಆ ಕಂಪನಿಯ ನೋಂದಾಯಿತ ಕಚೇರಿಯಲ್ಲಿ ಅಥವಾ
ಪ್ರಧಾನ ಕಚೇರಿಯಲ್ಲಿ ಅಥವಾ ವ್ಯವಹಾರದ ಸ್ಥಳದಲ್ಲಿ ವಶಾವಣೆ ಮಾಡಿದ್ದರೆ;

(ಬಿ) ಜಾರಿಗೊಳಿಸಬೇಕಾದ ವ್ಯಕ್ತಿಯು ಪಾಲುದಾರಿಕೆಯಾಗಿರುವಲ್ಲಿ, ಆ ದಸ್ತಾವೇಜನ್ನು ಪಾಲುದಾರಿಕೆಯ ವ್ಯವಹಾರವನ್ನು ನಡೆಸುತ್ತಿರುವಂಥ ಹೆಸರು ಅಥವಾ ಅಂಕಿತ ನಾಮದ ಮೂಲಕ ಗುರುತಿಸಿ ಅದರ ವ್ಯವಹಾರದ ಪ್ರಧಾನ ಸ್ಥಳದಲ್ಲಿ ಅದಕ್ಕೆ ವಿಳಾಸಿಸಿದ್ದರೆ; ಮತ್ತು

(i) ನೋಂದಾಯಿತ ಅಂಚೆ ಮೂಲಕ ಕಳುಹಿಸಿದ್ದರೆ; ಅಥವಾ

(ii) ವ್ಯವಹಾರದ ಸದರಿ ಸ್ಥಳದಲ್ಲಿ ವಶಾವಣೆ ಮಾಡಿದ್ದರೆ;

(ಸಿ) ಜಾರಿಗೊಳಿಸಬೇಕಾದ ವ್ಯಕ್ತಿಯು ಸಾರ್ವಜನಿಕ ನಿಕಾಯ ಅಥವಾ ನಿಗಮ, ಸಂಘ ಅಥವಾ ಇತರ ನಿಕಾಯವಾಗಿರುವಲ್ಲಿ, ಆ ದಸ್ತಾವೇಜನ್ನು ಅದರ ಪ್ರಧಾನ ಕಚೇರಿಯಲ್ಲಿ ಆ ನಿಕಾಯ, ನಿಗಮ ಅಥವಾ ಸಂಘದ ಕಾರ್ಯದರ್ಶಿ, ಖಜಾಂಜಿ ಅಥವಾ ಇತರ ಮುಖ್ಯ ಅಧಿಕಾರಿಗೆ ವಿಳಾಸಿಸಿದ್ದರೆ; ಮತ್ತು

(i) ನೋಂದಾಯಿಕ ಅಂಚೆ ಮೂಲಕ ಕಳುಹಿಸಿದ್ದರೆ; ಅಥವಾ

(ii) ಆ ಕಚೇರಿಯಲ್ಲಿ ವಶಾವಣೆ ಮಾಡಿದ್ದರೆ;

(ಡಿ) ಯಾವುದೇ ಇತರ ಸಂದರ್ಭದಲ್ಲಿ ಆ ದಸ್ತಾವೇಜನ್ನು ಜಾರಿಗೊಳಿಸಬೇಕಾದ ವ್ಯಕ್ತಿಗೆ ವಿಳಾಸಿಸಿದ್ದರೆ; ಮತ್ತು

(i) ಅದನ್ನು ಅವನಿಗೆ ಕೊಟ್ಟಿದ್ದರೆ ಅಥವಾ ಕೊಡಮಾಡಿದ್ದರೆ; ಅಥವಾ

(ii) ಅಂಥ ವ್ಯಕ್ತಿಯು ಸಿಕ್ಕದಿದ್ದರೆ, [1][ಕರ್ನಾಟಕ ರಾಜ್ಯ][1]ದೊಳಗಿದ್ದರೆ, ಅವನ ತಿಳಿದುಬಂದ ಕೊನೆಯ ವಾಸಸ್ಥಳ ಅಥವಾ ವ್ಯವಹಾರದ ಸ್ಥಳದಲ್ಲಿ ಯಾವುದೇ ಎದ್ದುಕಾಣುವ ಭಾಗದಲ್ಲಿ ಅಂಟಿಸಿದ್ದರೆ ಅಥವಾ ಅವನ ಕುಟುಂಬದ ಯಾವನೇ ವಯಸ್ಕ ಸದಸ್ಯರಿಗೆ ಕೊಟ್ಟಿದ್ದರೆ ಅಥವಾ ಕೊಡಮಾಡಿದ್ದರೆ ಅಥವಾ ಅದು ಸಂಬಂಧಪಡುವಂಥ ಭೂಮಿ ಅಥವಾ ಕಟ್ಟಡ ಯಾವುದಾದರೂ ಇದ್ದರೆ ಅದರ ಯಾವುದೇ ಎದ್ದು ಕಾಣುವ ಭಾಗದ ಮೇಲೆ ಅಂಟಿಸಿದ್ದರೆ; ಅಥವಾ

(iii) ಅದನ್ನು ಆ ವ್ಯಕ್ತಿಗೆ ನೋಂದಾಯಿತ ಅಂಚೆಯ ಮೂಲಕ ಕಳುಹಿಸಿದ್ದರೆ

- ಕ್ರಮಬದ್ಧವಾಗಿ ಜಾರಿಗೊಳಿಸಲಾಗಿದೆಯೆಂದು ಭಾವಿಸತಕ್ಕುದು.

(2) ಯಾವುದೇ ಭೂಮಿ ಅಥವಾ ಕಟ್ಟಡದ ಒಡೆಯ ಅಥವಾ ಅಧಿಭೋಗದಾರನಿಗೆ ಜಾರಿ ಮಾಡಬೇಕೆಂದು ಅಗತ್ಯಪಡಿಸಿದ ಅಥವಾ ಅಧಿಕೃತಗೊಳಿಸಿರುವಂಥ ಯಾವುದೇ ದಸ್ತಾವೇಜನ್ನು, ಆ ಭೂಮಿ ಅಥವಾ ಕಟ್ಟಡದ ಸಂದರ್ಭಾನುಸಾರ "ಒಡೆಯ ಅಥವಾ ಅಧಿಭೋಗದಾರ" ಇವನಿಗೆ (ಆ ಭೂಮಿ ಅಥವಾ ಕಟ್ಟಡವನ್ನು ಹೆಸರಿಸಿ) ಹೆಚ್ಚಿನ ಹೆಸರು ಅಥವಾ ವಿವರಣೆ ಇಲ್ಲದೆ ವಿಳಾಸಿಸಬಹುದು; ಮತ್ತು ಅದನ್ನು,-

1. 1973ರ ಕರ್ನಾಟಕ ಕಾನೂನುಗಳ ಅಳವಡಿಕೆಗಳ ಆದೇಶದ ಮೂಲಕ 1.11.1973 ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.

(ಎ) ಹಾಗೆ ವಿಳಾಸಿಸಿದ ಆ ದಸ್ತಾವೇಜನ್ನು (1)ನೇ ಉಪಪ್ರಕರಣದ (ಡಿ) ಖಂಡಕ್ಕೆ ಅನುಸಾರವಾಗಿ ಕಳುಹಿಸಿದ್ದರೆ ಅಥವಾ ವಶಾವಣೆ ಮಾಡಿದ್ದರೆ; ಅಥವಾ

(ಬಿ) ಹಾಗೆ ವಿಳಾಸಿಸಿದ ದಸ್ತಾವೇಜನ್ನು ಅಥವಾ ಹಾಗೆ ವಿಳಾಸಿಸಿದ ಅದರ ಪ್ರತಿಯನ್ನು ಆ ಭೂಮಿ ಅಥವಾ ಕಟ್ಟಡದಲ್ಲಿನ ಯಾವನೇ ವ್ಯಕ್ತಿಗೆ ವಶಾವಣೆ ಮಾಡಿದ್ದರೆ ಅಥವಾ ಅದನ್ನು ವಶಾವಣೆ ಮಾಡಬಹುದಾದ ವ್ಯಕ್ತಿ ಆ ಭೂಮಿ ಅಥವಾ ಕಟ್ಟಡದಲ್ಲಿ ಇಲ್ಲದೆ ಇರುವಲ್ಲಿ, ಆ ಭೂಮಿ ಅಥವಾ ಕಟ್ಟಡದ ಯಾವುದೇ ಎದ್ದು ಕಾಣುವ ಭಾಗದಲ್ಲಿ ಅಂಟಿಸಿದ್ದರೆ

- ಕ್ರಮಬದ್ಧವಾಗಿ ಜಾರಿಗೊಳಿಸಲಾಗಿದೆಯೆಂದು ಭಾವಿಸತಕ್ಕುದು.

(3) ಈ ಪ್ರಕರಣಕ್ಕೆ ಅನುಸಾರವಾಗಿ ದಸ್ತಾವೇಜನ್ನು ಪಾಲುದಾರಿಕೆಗೆ ಜಾರಿಗೊಳಿಸಿರುವಲ್ಲಿ, ಆ ದಸ್ತಾವೇಜನ್ನು ಪ್ರತಿಯೊಬ್ಬ ಪಾಲುದಾರನಿಗೆ ಜಾರಿಗೊಳಿಸಲಾಗಿದೆ ಎಂದು ಭಾವಿಸತಕ್ಕುದು.

(4) ಯಾವುದೇ ಆವರಣದ ಒಡೆಯನಿಗೆ ಯಾವುದೇ ದಸ್ತಾವೇಜನ್ನು ಜಾರಿ ಮಾಡುವುದನ್ನು ಸಾಧ್ಯಗೊಳಿಸುವ ಉದ್ದೇಶಕ್ಕಾಗಿ, ನೀರು ಸರಬರಾಜು ಇಂಜಿನಿಯರ್ ಅಥವಾ ಸ್ಯಾನಿಟರಿ ಇಂಜಿನಿಯರ್ ಅಥವಾ ಹಾಗೆ ಮಾಡಲು ಅಧಿಕೃತಗೊಳಿಸಿದ ಅಥವಾ ಶಕ್ತಗೊಳಿಸಿದ ಇತರ ಯಾವನೇ ಅಧಿಕಾರಿಯು ಬರಹದಲ್ಲಿನ ನೋಟೀಸಿನ ಮೂಲಕ ಆ ಆವರಣದ ಅಧಿಭೋಗದಾರನನ್ನು ಅದರ ಒಡೆಯನ ಹೆಸರು ಮತ್ತು ವಿಳಾಸವನ್ನು ತಿಳಿಸಲು ಅಗತ್ಯಪಡಿಸಬಹುದು.

(5) ದಸ್ತಾವೇಜನ್ನು ಜಾರಿಗೊಳಿಸಬೇಕಾದ ವ್ಯಕ್ತಿಯು ಅಪ್ರಾಪ್ತ ವಯಸ್ಕನಾಗಿರುವಲ್ಲಿ, ಅವನ ಪಾಲಕ ಅಥವಾ ಅವನ ಕುಟುಂಬದ ಯಾವನೇ ವಯಸ್ಕ ಸದಸ್ಯನಿಗೆ ಮಾಡಿದ ಜಾರಿಯು ಅಪ್ರಾಪ್ತ ವಯಸ್ಕನಿಗೆ ಮಾಡಿದ ಜಾರಿಯಾಗಿರುವುದಾಗಿ ಭಾವಿಸತಕ್ಕುದು.

(6) 99 ಮತ್ತು 100ನೇ ಪ್ರಕರಣ ಮತ್ತು ಈ ಪ್ರಕರಣದಲ್ಲಿ ಇರುವುದು ಯಾವುದೂ, ನ್ಯಾಯಾಲಯವು ಈ ಅಧಿನಿಯಮದ ಮೇರೆಗೆ ಹೊರಡಿಸಿದ ಯಾವುದೇ ಸಮನಿಗೆ ಅನ್ವಯವಾಗತಕ್ಕುದಲ್ಲ.

(7) ಈ ಪ್ರಕರಣದ ಅರ್ಥ ವ್ಯಾಪ್ತಿಯೊಳಗೆ ಸೇವಕನು ಕುಟುಂಬದ ಸದಸ್ಯನಾಗಿರುವುದಿಲ್ಲ.

**102. ಚಾರ್ಜುಗಳಿಗಾಗಿನ ಬಿಲ್ಲುಗಳು ಅಥವಾ ತಗಾದೆ ನೋಟೀಸನ್ನು ಸಾಮಾನ್ಯ ಅಂಚೆಯ ಮೂಲಕ ಜಾರಿಗೊಳಿಸುವುದು:–** 100 ಮತ್ತು 101ನೇ ಪ್ರಕರಣಗಳಲ್ಲಿ ಏನೇ ಅಡಕವಾಗಿದ್ದಾಗ್ಯೂ, ಯಾವುದೇ ಚಾರ್ಜುಗಳಿಗಾಗಿನ ಬಿಲ್ಲು ಅಥವಾ ತಗಾದೆ ನೋಟೀಸನ್ನು, 101ನೇ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಯುಕ್ತ ವ್ಯಕ್ತಿಗೆ ಅವನ ತಿಳಿದು ಬಂದ ಕೊನೆಯ ವಾಸ ಅಥವಾ ವ್ಯವಹಾರದ ಸ್ಥಳಕ್ಕೆ ವಿಳಾಸಿಸಿದ, ಅಂಚೆಗೆ ಹಾಕಿದ ಬಗ್ಗೆ ಪ್ರಮಾಣಪತ್ರದ ಮೇರೆಗಿನ ಮೊದಲೇ ಸಂದಾಯ ಮಾಡಿದ ಪತ್ರದೊಂದಿಗೆ ಅದನ್ನು ಸಾಮಾನ್ಯ ಅಂಚೆಯ ಮೂಲಕ ಕಳುಹಿಸುವ ಮೂಲಕ, ಜಾರಿಗೊಳಿಸಬಹುದು ಮತ್ತು ಹಾಗೆ ಕಳುಹಿಸಲಾದ ಪ್ರತಿಯೊಂದು ಬಿಲ್ಲು ಅಥವಾ ನೋಟೀಸಿನ ಜಾರಿಯನ್ನು ರುಜುವಾತುಪಡಿಸುವಲ್ಲಿ ಆ ಪತ್ರವನ್ನು ಸರಿಯಾಗಿ ವಿಳಾಸಿಸಲಾಗಿತ್ತು ಮತ್ತು ಅಂಚೆಗೆ ಹಾಕಿದ ಬಗ್ಗೆ ಪ್ರಮಾಣ ಪತ್ರದ ಮೇರೆಗೆ ಅಂಚೆಗೆ ಹಾಕಲಾಗಿತ್ತು ಎಂಬುದನ್ನು ರುಜುವಾತುಪಡಿಸಲು ಅದು ಸಾಕಷ್ಟಾಗಿರತಕ್ಕುದು.

**103. ನೋಟೀಸು, ಇತ್ಯಾದಿಗಳನ್ನು ಪಾಲಿಸದೆ ಇರುವ ಸಂದರ್ಭದಲ್ಲಿ ಅಧಿಕಾರ:–** ಈ ಅಧಿನಿಯಮ ಅಥವಾ ಅದರ ಮೇರೆಗೆ ರಚಿಸಿದ ಯಾವುದೇ ನಿಯಮ ಅಥವಾ ವಿನಿಯಮದ ಮೇರೆಗೆ ಯಾವನೇ ವ್ಯಕ್ತಿಗೆ ಯಾವುದೇ ಕಾಮಗಾರಿಯನ್ನು ನಿರ್ವಹಿಸಲು ಅಥವಾ ಯಾವುದೇ ಕಾರ್ಯವನ್ನು ಮಾಡಲು ಅಂಥ ವ್ಯಕ್ತಿಯನ್ನು ಅಗತ್ಯಪಡಿಸಿಕೊಟ್ಟ ಯಾವುದೇ ನೋಟೀಸು ಅಥವಾ ಆದೇಶ ಅಥವಾ ಕಡ್ಡಾಯ ಕೋರಿಕೆಯ ನಿಬಂಧನೆಗಳನ್ನು ಪಾಲಿಸದೆ ಇರುವ ಸಂದರ್ಭದಲ್ಲಿ, ತಪ್ಪಿದ ವ್ಯಕ್ತಿಯು ಅಂಥ ತಪ್ಪಿಗಾಗಿ ದಂಡನೆಗೆ ಗುರಿಯಾಗಿರಲಿ ಅಥವಾ ಇಲ್ಲದಿರಲಿ ಅಥವಾ ಅದಕ್ಕಾಗಿ ಪ್ರಾಸಿಕ್ಯೂಷನ್ನಿಗೆ ಒಳಗಾಗಿರಲಿ ಅಥವಾ ಇಲ್ಲದಿರಲಿ ಅಥವಾ ಯಾವುದೇ ದಂಡನೆಯ ಆದೇಶಕ್ಕೆ ಗುರಿಯಾಗಿರಲಿ ಅಥವಾ ಇಲ್ಲದಿರಲಿ, ಯಾರ ಸೂಚನೆಯ ಮೇರೆಗೆ ಆ ನೋಟೀಸು, ಆದೇಶ ಅಥವಾ ಕಡ್ಡಾಯ ಕೋರಿಕೆಯನ್ನು ಕೊಡಲಾಗಿದೆಯೋ ಆ ಪ್ರಾಧಿಕಾರ ಅಥವಾ ಅಧಿಕಾರಿಗೆ, ಅಂಥ ವ್ಯಕ್ತಿಗೆ ಬರಹದಲ್ಲಿನ ನೋಟೀಸನ್ನು ಕೊಟ್ಟ ತರುವಾಯ, ಅಂಥ ವ್ಯಕ್ತಿಯು ಮಾಡಬೇಕೆಂದು ಅಥವಾ ನಿರ್ವಹಿಸಬೇಕೆಂದು ಅಗತ್ಯಪಡಿಸಿದ ಕಾರ್ಯ ಅಥವಾ ಕಾಮಗಾರಿಯನ್ನು ಪೂರ್ಣಗೊಳಿಸುವುದಕ್ಕಾಗಿ ಅವಶ್ಯವಾಗಬಹುದಾದಂಥ ಕ್ರಮ ಅಥವಾ ಅಂಥ ಕಾರ್ಯಗಳನ್ನು ಕೈಗೊಳ್ಳುವುದು ಕಾನೂನು ಸಮ್ಮತವಾಗಿರತಕ್ಕುದು ಮತ್ತು ಆ ಬಗ್ಗೆ ವಹಿಸಿದ ಎಲ್ಲಾ ವೆಚ್ಚಗಳನ್ನು, ತಗಾದೆ ಮಾಡಿದಾಗ ಮಂಡಳಿಗೆ ಸಂದಾಯ ಮಾಡತಕ್ಕುದು ಮತ್ತು ಅಂಥ ತಗಾದೆಯ ತರುವಾಯ ಹತ್ತು ದಿವಸಗಳೊಳಗೆ ಸಂದಾಯಮಾಡದಿದ್ದರೆ, ಅವುಗಳನ್ನು ಈ ಅಧಿನಿಯಮದ ಮೇರೆಗೆ ಸಂದಾಯಮಾಡಬೇಕಾದ ಚಾರ್ಜುಗಳ ಬಾಕಿಯಂತೆ ವಸೂಲ್ಮಾಡತಕ್ಕುದು.

**104. ಒಡೆಯನು ತಪ್ಪಿದಲ್ಲಿ ಸಂದಾಯ ಮಾಡಲು ಅಧಿಭೋಗದಾರನ ಹೊಣೆ:–** (1) ಅವನ ಒಡೆತನದಲ್ಲಿರುವಂಥ ಸ್ವತ್ತಿಗೆ ಸಂಬಂಧಿಸಿದಂತೆ ಯಾವನೇ ವ್ಯಕ್ತಿಗೆ ಯಾವುದೇ ನೋಟೀಸು, ಆದೇಶ ಅಥವಾ ಕಡ್ಡಾಯ ಕೋರಿಕೆಯನ್ನು ಕೊಡಲಾಗಿದ್ದರೆ, ಯಾರ ಸೂಚನೆಯ ಮೇರೆಗೆ ಅಂಥ ನೋಟೀಸು, ಆದೇಶ ಅಥವಾ ಕಡ್ಡಾಯ ಕೋರಿಕೆಯನ್ನು ಕೊಡಲಾಗಿದೆಯೋ ಆ ಪ್ರಾಧಿಕಾರ ಅಥವಾ ಅಧಿಕಾರಿಯು, ಅಂಥ ಸ್ವತ್ತು ಅಥವಾ ಅದರ ಯಾವುದೇ ಭಾಗದ ಅಧಿಭೋಗದಾರನನ್ನು, ಒಡೆಯನಿಗೆ ಬದಲು ಅವನಿಗೆ, ಅಂಥ ಸ್ವತ್ತಿಗೆ ಸಂಬಂಧಿಸಿದಂತೆ ಅವನು ಸಂದಾಯಮಾಡಬೇಕಾದ ಯಾವುದೇ ಬಾಡಿಗೆಯನ್ನು 103ನೇ ಪ್ರಕರಣದ ಮೇರೆಗೆ ಒಡೆಯನಿಂದ ವಸೂಲು ಮಾಡಬಹುದಾದ ಮೊಬಲಗಿನಷ್ಟರವರೆಗೆ ಅದು ಬಾಕಿಯಾಗಿರುವಂತೆ ಸಂದಾಯ ಮಾಡಲು ಅಗತ್ಯಪಡಿಸಬಹುದು:

ಪರಂತು, ಅಧಿಭೋಗದಾರನು, ಅವನು ಸಂದಾಯಮಾಡಬೇಕಾದ ಬಾಡಿಗೆಯ ಸರಿಯಾದ ಮೊಬಲಗು, ಅಥವಾ ಅದನ್ನು ಯಾರಿಗೆ ಸಂದಾಯ ಮಾಡಬೇಕಾಗಿದೆಯೋ ಆ ವ್ಯಕ್ತಿಯ ಹೆಸರು ಮತ್ತು ವಿಳಾಸವನ್ನು ಬಹಿರಂಗಪಡಿಸಲು ನಿರಾಕರಿಸಿದರೆ, ಆ ಪ್ರಾಧಿಕಾರ ಅಥವಾ ಅಧಿಕಾರಿಯು 103ನೇ ಪ್ರಕರಣದ ಮೇರೆಗೆ ವಸೂಲಾಗಬೇಕಾದ ಒಟ್ಟು ಮೊಬಲಗನ್ನು ಈ ಅಧಿನಿಯಮದ ಮೇರೆಗೆ ಸಂದಾಯಮಾಡಬೇಕಾದ ಚಾರ್ಜುಗಳ ಬಾಕಿ ಎಂಬಂತೆ ಅಧಿಭೋಗದಾರನಿಂದ ವಸೂಲು ಮಾಡಬಹುದು.

(2) (1)ನೇ ಉಪಪ್ರಕರಣದ ಮೇರೆಗೆ ಒಡೆಯನಿಗೆ ಬದಲಾಗಿ ಅಧಿಭೋಗದಾರನಿಂದ ವಸೂಲುಮಾಡಿದ ಯಾವುದೇ ಮೊಬಲಗನ್ನು ಒಡೆಯ ಮತ್ತು ಅಧಿಭೋಗದಾರನ ನಡುವೆ ತದ್ವಿರುದ್ಧವಾಗಿ ಮಾಡಿಕೊಂಡ ಯಾವುದೇ ಕರಾರು ಇಲ್ಲದೆ ಇರುವಲ್ಲಿ, ಒಡೆಯನಿಗೆ ಸಂದಾಯ ಮಾಡಲಾಗಿದೆ ಎಂದು ಭಾವಿಸತಕ್ಕುದು.

**105. ಒಡೆಯನು ತಪ್ಪಿದಲ್ಲಿ ಅಧಿಭೋಗದಾರನಿಂದ ಕಾಮಗಾರಿಯ ನಿರ್ವಹಣೆ ಮತ್ತು ಬಾಡಿಗೆಯಿಂದ ವೆಚ್ಚಗಳನ್ನು ಮುರಿದುಕೊಳ್ಳುವುದು:-** ಯಾವುದೇ ಭೂಮಿಯ ಅಥವಾ ಕಟ್ಟಡದ ಒಡೆಯನು, ಈ ಅಧಿನಿಯಮದ ಅಥವಾ ಅದರ ಮೇರೆಗೆ ರಚಿಸಿದ ಯಾವುದೇ ನಿಯಮ ಅಥವಾ ವಿನಿಯಮದ ಮೇರೆಗೆ ನಿರ್ವಹಿಸಲು ಅವನನ್ನು ಅಗತ್ಯಪಡಿಸಿರುವಂಥ ಯಾವುದೇ ಕಾಮಗಾರಿಯನ್ನು ನಿರ್ವಹಿಸಲು ತಪ್ಪಿದಾಗಲೆಲ್ಲಾ, ಅಂಥ ಭೂಮಿ ಅಥವಾ ಕಟ್ಟಡದ ಅಧಿಭೋಗದಾರನು ಯಾವನಾದರೂ ಇದ್ದರೆ, ಅವನು, ಮಂಡಳಿಯ ಅನುಮೋದನೆಯೊಂದಿಗೆ ಸದರಿ ಕಾಮಗಾರಿಯನ್ನು ನಿರ್ವಹಿಸಬಹುದು ಮತ್ತು ಅವನು, ಒಡೆಯ ಮತ್ತು ಅಧಿಭೋಗದಾರನ ನಡುವೆ ತದ್ವಿರುದ್ಧವಾದ ಯಾವುದೇ ಕರಾರಿಗೆ ಒಳಪಟ್ಟು, ಒಡೆಯನಿಂದ ಆ ಕಾಮಗಾರಿಯನ್ನು ನಿರ್ವಹಿಸುವಲ್ಲಿ ಅವನು ವಹಿಸಿದ ಯುಕ್ತ ವೆಚ್ಚಗಳನ್ನು ವಸೂಲು ಮಾಡಲು ಹಕ್ಕುಳ್ಳವನಾಗಿರತಕ್ಕುದು ಮತ್ತು ಒಡೆಯನಿಗೆ ಅವನು ಸಂದಾಯ ಮಾಡಬೇಕಾದ ಬಾಡಿಗೆಯಿಂದ ಅದರ ಮೊಬಲಗನ್ನು ಅವನು ಮುರಿದುಕೊಳ್ಳಬಹುದು.

**106. ಏಜೆಂಟರು ಮತ್ತು ನ್ಯಾಸಧಾರಿಗಳಿಗೆ ಪರಿಹಾರ:-** (1) ರಿಸೀವರು, ಏಜೆಂಟ್ ಅಥವಾ ನ್ಯಾಸಧಾರಿ ಎಂದು ಸ್ಥಿರಸ್ವತ್ತಿನ ಬಾಡಿಗೆಯನ್ನು ಅವನು ಸ್ವೀಕರಿಸುವ ಕಾರಣದಿಂದಾಗಿ ಯಾವನೇ ವ್ಯಕ್ತಿಯು ಅಥವಾ ಅವನು ರಿಸೀವರ್, ಏಜೆಂಟ್ ಅಥವಾ ನ್ಯಾಸಧಾರಿಯಾಗಿದ್ದು, ಆ ಸ್ವತ್ತನ್ನು ಬಾಡಿಗೆದಾರನಿಗೆ ಕೊಟ್ಟಿದ್ದಿದ್ದರೆ, ಆ ಬಾಡಿಗೆಯನ್ನು ಸ್ವೀಕರಿಸುವ ಆ ವ್ಯಕ್ತಿಯು, ಈ ಅಧಿನಿಯಮ ಅಥವಾ ಅದರ ಮೇರೆಗೆ ರಚಿಸಿದ ಯಾವುದೇ ನಿಯಮ ಅಥವಾ ವಿನಿಯಮದ ಮೇರೆಗೆ ಯಾವುದನ್ನು ವಿವೇಚಿಸುವುದಕ್ಕಾಗಿ ಹಣವು ಅಗತ್ಯವಾಗಿದೆಯೋ ಆ ಸ್ವತ್ತಿನ ಒಡೆಯನಿಗೆ ವಿಧಿಸಿದ ಯಾವುದೇ ಬಾಧ್ಯತೆಯನ್ನು ವಿಮೋಚನೆಗೊಳಿಸಲು ಬದ್ಧನಾಗಿರುವಲ್ಲಿ ಅವನು ಆ ಉದ್ದೇಶಕ್ಕಾಗಿ ಸಾಕಷ್ಟಾದ, ಒಡೆಯನಿಗೆ ಸೇರಿದ ಅವನಲ್ಲಿರುವ ನಿಧಿಗಳನ್ನು ಅವನು ಹೊಂದಿರುವ ಅಥವಾ ಅವನದೇ ಆದ ಅನುಚಿತ ಕಾರ್ಯ ಅಥವಾ ತಪ್ಪಿತವು ಇಲ್ಲದಿದ್ದರೆ ಅವನು ಅವುಗಳನ್ನು ಹೊಂದಿರಬಹುದಾಗಿದ್ದ ಹೊರತು ಆ ಬಾಧ್ಯತೆಯನ್ನು ವಿಮೋಚನೆಗೊಳಿಸಲು ಬದ್ಧನಾಗಿರತಕ್ಕುದಲ್ಲ.

(2) (1)ನೇ ಉಪಪ್ರಕರಣದ ಮೇರೆಗಿನ ಪರಿಹಾರಕ್ಕೆ ರಿಸೀವರು, ಏಜೆಂಟ್ ಅಥವಾ ನ್ಯಾಸಧಾರಿಯು ಹಕ್ಕುಳ್ಳವನಾಗಿರುವನು ಎಂಬ ಯಾವುದೇ ಸಂಗತಿಯನ್ನು ರುಜುವಾತುಪಡಿಸುವ ಭಾರವು ಅವನ ಮೇಲೆ ಇರತಕ್ಕುದು.

(3) ಯಾವನೇ ರಿಸೀವರ್, ಏಜೆಂಟ್ ಅಥವಾ ನ್ಯಾಸಧಾರಿಯು ಈ ಪ್ರಕರಣದ ಮೇರೆಗಿನ ಪರಿಹಾರಕ್ಕೆ ಅವನ ಹಕ್ಕನ್ನು ಕ್ಲೇಮು ಮಾಡಿರುವಲ್ಲಿ ಮತ್ತು ಸ್ಥಾಪಿಸುವಲ್ಲಿ ಮಂಡಳಿಯು ಬರಹದಲ್ಲಿನ ನೋಟೀಸು ಮೂಲಕ ಹಿಂದೆ ಹೇಳಿದಂತೆ ಅವನ ಬಾಧ್ಯತೆಯನ್ನು ವಿಮೋಚನೆಗೊಳಿಸಲು, ಒಡೆಯನ ಪರವಾಗಿ ಅಥವಾ ಅವನ ಉಪಯೋಗಕ್ಕಾಗಿ ಅವನು ಸ್ವೀಕರಿಸಬಹುದಾದಂಥ ಹಣಗಳನ್ನು ಮೊದಲು ವಿನಿಯೋಗಿಸಲು ಅವನನ್ನು ಅಗತ್ಯಪಡಿಸಬಹುದು ಮತ್ತು ಆ ನೋಟೀಸನ್ನು ಪಾಲಿಸಲು ತಪ್ಪಿದರೆ ಅವನು ಆ ಬಾಧ್ಯತೆಯನ್ನು ವಿಮೋಚನೆಗೊಳಿಸಲು ವೈಯಕ್ತಿಕವಾಗಿ ಹೊಣೆಗಾರನಾಗಿರುವುದಾಗಿ ಭಾವಿಸತಕ್ಕುದು.

**107. ಅಪರಾಧಿಗಳಿಂದ ಉಂಟಾದ ಹಾನಿಗಾಗಿ ಅವರು ಸಂದಾಯ ಮಾಡಬೇಕಾದ ನಷ್ಟಪರಿಹಾರ:-** (1) ಈ ಅಧಿನಿಯಮ ಅಥವಾ ಅದರ ಮೇರೆಗೆ ರಚಿಸಿದ ಯಾವುದೇ ನಿಯಮ ಅಥವಾ ವಿನಿಯಮದ ವಿರುದ್ಧದ ಅಪರಾಧದ ಬಗ್ಗೆ ಅಪರಾಧಿ ಎಂದು ನಿರ್ಣೀತನಾಗಿರುವ ಯಾವನೇ ವ್ಯಕ್ತಿಯು ಸದರಿ ಅಪರಾಧಕ್ಕಾಗಿ ಅವನು ಶಿಕ್ಷೆಗೆ ಗುರಿಯಾಗಿರಬಹುದಾದಂಥ ಯಾವುದೇ ದಂಡನೆ ಏನೇ ಇದ್ದಾಗ್ಯೂ, ಮಂಡಳಿಯು ಯುಕ್ತವೆಂದು ಪರ್ಯಾಲೋಚಿಸಬಹುದಾದಂತೆ ಸದರಿ ಅಪರಾಧದಿಂದ ಮಂಡಳಿಯ ಸ್ವತ್ತಿಗೆ ಉಂಟಾಗುವ ಯಾವುದೇ ಹಾನಿಗಾಗಿ ಅಂಥ ನಷ್ಟಪರಿಹಾರವನ್ನು ಸಂದಾಯ ಮಾಡಲು ಹೊಣೆಗಾರನಾಗಿರತಕ್ಕುದು.

(2) (1)ನೇ ಉಪಪ್ರಕರಣದ ಮೇರೆಗೆ ಸಂದಾಯ ಮಾಡಬೇಕಾದ ನಷ್ಟಪರಿಹಾರದ ಮೊಬಲಗಿನ ಬಗ್ಗೆ ವಿವಾದವು ಉಂಟಾಗುವ ಸಂದರ್ಭದಲ್ಲಿ ಅಂಥ ಮೊಬಲಗನ್ನು ಅವನಿಗೆ ಮಾಡಿಕೊಂಡ ಅರ್ಜಿಯ ಮೇಲೆ ಸದರಿ ಅಪರಾಧದ ಬಗ್ಗೆ ಯಾರ ಮುಂದೆ ಅಪರಾಧಿ ಎಂದು ನಿರ್ಣೀತನಾಗಿದ್ದನೋ ಆ ಮ್ಯಾಜಿಸ್ಟ್ರೇಟನು ನಿರ್ಧರಿಸತಕ್ಕುದು, ಮತ್ತು ಹಾಗೆ ನಿರ್ಧರಿಸಿದ ನಷ್ಟ ಪರಿಹಾರದ ಮೊಬಲಗನ್ನು ಸಂದಾಯ ಮಾಡದೆ ಇದ್ದಾಗ, ಅದನ್ನು ಸದರಿ ಮ್ಯಾಜಿಸ್ಟ್ರೇಟನಿಂದ ಹೊರಟ ವಾರೆಂಟಿನ ಮೇರೆಗೆ ಅದಕ್ಕಾಗಿ ಹೊಣೆಗಾರನಾದ ವ್ಯಕ್ತಿಗೆ ಅವನು ವಿಧಿಸಿದ ಜುಲ್ಮಾನೆಯು ಅದು ಆಗಿದ್ದಿದ್ದರೆ ಹೇಗೋ ಹಾಗೆ ವಸೂಲು ಮಾಡತಕ್ಕುದು.

**108. ಬಾಕಿಗಳನ್ನು ವಸೂಲು ಮಾಡುವ ವಿಧಾನ:-** (1) ಈ ಅಧಿನಿಯಮ ಅಥವಾ ಅದರ ಮೇರೆಗೆ ರಚಿಸಿದ ಯಾವುದೇ ನಿಯಮ, ವಿನಿಯಮ ಅಥವಾ ಆದೇಶದ ಮೇರೆಗಿನ ಯಾವುದೇ ಚಾರ್ಜು, ವೆಚ್ಚಗಳು, ಖರ್ಚುಗಳು, ಫೀಜುಗಳು, ದರಗಳು, ಬಾಡಿಗೆ ಇವುಗಳ ಬಗ್ಗೆ ಅಥವಾ ಯಾವುದೇ ಇತರ ಬಾಬಿನ ಬಗ್ಗೆ ಮಂಡಳಿಗೆ ಬಾಕಿಯಾದ ಯಾವುದೇ ಮೊತ್ತವನ್ನು ವಸೂಲಿಯ ಬಗೆಗಿನ ಯಾವುದೇ ಇತರ ವಿಧಾನಕ್ಕೆ ಬಾಧಕವಾಗದಂತೆ ಅಂಥ ಮೊತ್ತವು ಬಾಕಿಯಾಗಿರುವ ಯಾವನೇ ವ್ಯಕ್ತಿಯಿಂದ,-

(ಎ) ಅದು ಭೂಕಂದಾಯದ ಬಾಕಿಯಾಗಿದ್ದಿದ್ದರೆ ಹೇಗೋ ಹಾಗೆ, ಅಥವಾ

(ಬಿ) ಅಂಥ ಮ್ಯಾಜಿಸ್ಟ್ರೇಟನು, ಯಾವನೇ ನ್ಯಾಯಿಕ ಮ್ಯಾಜಿಸ್ಟ್ರೇಟನಿಗೆ ಮಾಡಿಕೊಂಡ ಅರ್ಜಿಯ ಮೇಲೆ ಅದು ಅವನು ವಿಧಿಸಿದ ಜುಲ್ಮಾನೆಯಾಗಿದ್ದಿದ್ದರೆ ಹೇಗೋ ಹಾಗೆ

- ವಸೂಲು ಮಾಡಬಹುದು.

**109. ಸಾಮಾನ್ಯ ದಂಡ :-** ಈ ಅಧಿನಿಯಮದ ಮೂಲಕ ದಂಡನೆಯನ್ನು ವ್ಯಕ್ತವಾಗಿ ಉಪಬಂಧಿಸಿಲ್ಲದಂಥ ಯಾವುದೇ ಪ್ರಕರಣದಲ್ಲಿ ಯಾರೇ ಆಗಲಿ, ಈ ಅಧಿನಿಯಮದ ಯಾವುದೇ ಉಪಬಂಧ ಅಥವಾ ಯಾವುದೇ ನಿಯಮ ಅಥವಾ ವಿನಿಯಮ [1][ಅಥವಾ ಉಪವಿಧಿ][1]ಯ ಮೇರೆಗೆ ಹೊರಡಿಸಿದ ಯಾವುದೇ ನೋಟೀಸು, ಆದೇಶ ಅಥವಾ ಕಡ್ಡಾಯ ಕೋರಿಕೆಯನ್ನು ಪಾಲಿಸಲು ತಪ್ಪಿದರೆ ಅಥವಾ ಈ ಅಧಿನಿಯಮದ ಯಾವುದೇ ಉಪಬಂಧ ಅಥವಾ ಯಾವುದೇ ನಿಯಮ ಅಥವಾ ವಿನಿಯಮ [1][ಅಥವಾ ಉಪವಿಧಿ][1]ಯನ್ನು ಅನ್ಯಥಾ ಉಲ್ಲಂಘಿಸಿದರೆ ಅವನು ಒಂದು ನೂರು ರೂಪಾಯಿಗಳಿಗೆ ವಿಸ್ತರಿಸಬಹುದಾದಂಥ ಜುಲ್ಮಾನೆಯಿಂದ ಮತ್ತು ಮುಂದುವರಿಯುತ್ತಿರುವ ತಪ್ಪಿತ ಅಥವಾ ಉಲ್ಲಂಘನೆಯ ಸಂದರ್ಭದಲ್ಲಿ ಅಂಥ ಮೊದಲ ತಪ್ಪಿತ ಅಥವಾ ಉಲ್ಲಂಘನೆಗಾಗಿನ ಅಪರಾಧ ನಿರ್ಣಯದ ತರುವಾಯ ಅಂಥ ತಪ್ಪಿತ ಅಥವಾ ಉಲ್ಲಂಘನೆಯು ಮುಂದುವರಿಯುತ್ತಿರುವಂಥ ಕಾಲದಲ್ಲಿ ಪ್ರತಿಯೊಂದು ದಿವಸಕ್ಕಾಗಿ ಇಪ್ಪತ್ತು ರೂಪಾಯಿಗಳಿಗೆ ವಿಸ್ತರಿಸಬಹುದಾದಂಥ ಹೆಚ್ಚಿನ ಜುಲ್ಮಾನೆಯಿಂದ ದಂಡನೀಯನಾಗತಕ್ಕುದು.

**110. ಕಂಪನಿಗಳಿಂದ ಅಪರಾಧಗಳು :-** (1) ಈ ಅಧಿನಿಯಮದ ಮೇರೆಗಿನ ಯಾವುದೇ ಅಪರಾಧವನ್ನು ಕಂಪನಿಯು ಮಾಡಿರುವಲ್ಲಿ, ಆ ಅಪರಾಧವನ್ನು ಮಾಡಿದ್ದ ಕಾಲದಲ್ಲಿ, ಆ ಕಂಪನಿಯ ವ್ಯವಹಾರವನ್ನು ನಡೆಸುವುದಕ್ಕಾಗಿ ಕಂಪನಿಯ ಪ್ರಭಾರದಲ್ಲಿದ್ದ ಮತ್ತು ಅದಕ್ಕೆ ಜವಾಬ್ದಾರನಾಗಿದ್ದ ಪ್ರತಿಯೊಬ್ಬ ವ್ಯಕ್ತಿ ಮತ್ತು ಕಂಪನಿಯು ಆ ಅಪರಾಧದ ಬಗ್ಗೆ ತಪ್ಪಿತಸ್ಥರಾಗಿರುವುದಾಗಿ ಭಾವಿಸತಕ್ಕುದು ಮತ್ತು ತದನುಸಾರವಾಗಿ ವ್ಯವಹರಣೆಗೆ ಗುರಿಯಾಗತಕ್ಕುದು ಮತ್ತು ದಂಡಿತರಾಗತಕ್ಕುದು:

ಪರಂತು, ಈ ಉಪಪ್ರಕರಣದಲ್ಲಿ ಅಡಕವಾಗಿರುವುದು ಯಾವುದೂ, ಯಾವನೇ ಅಂಥ ವ್ಯಕ್ತಿಯನ್ನು ಈ ಅಧಿನಿಯಮದಲ್ಲಿ ಉಪಬಂಧಿಸಿರುವ ಯಾವುದೇ ದಂಡನೆಗೆ ಅವನಿಗೆ ಅವನ ತಿಳಿವಳಿಕೆಯಿಲ್ಲದೆ ಆ ಅಪರಾಧವನ್ನು ಮಾಡಲಾಗಿದ್ದಿತೆಂದು ಅಥವಾ ಅಂಥ ಅಪರಾಧವನ್ನು ಮಾಡುವುದನ್ನು ತಡೆಗಟ್ಟಲು ಅವನು ಯುಕ್ತ ಶ್ರದ್ಧೆಯನ್ನು ವಹಿಸಿದ್ದನೆಂದು ಅವನು ರುಜುವಾತುಪಡಿಸಿದರೆ ಯಾವುದೇ ದಂಡನೆಗೆ ಗುರಿಪಡಿಸತಕ್ಕುದಲ್ಲ.

(2) (1)ನೇ ಉಪಪ್ರಕರಣದಲ್ಲಿ ಏನೇ ಅಡಕವಾಗಿದ್ದಾಗ್ಯೂ, ಈ ಅಧಿನಿಯಮದ ಮೇರೆಗಿನ ಅಪರಾಧವನ್ನು ಕಂಪನಿಯು ಮಾಡಿರುವಲ್ಲಿ ಮತ್ತು ಆ ಅಪರಾಧವನ್ನು ಕಂಪನಿಯ ಯಾವನೇ ನಿರ್ದೇಶಕ, ವ್ಯವಸ್ಥಾಪಕ, ಕಾರ್ಯದರ್ಶಿ ಅಥವಾ ಇತರ ಅಧಿಕಾರಿಯ ಸಮ್ಮತಿ ಅಥವಾ ಪರೋಕ್ಷ ಸಮ್ಮತಿಯಿಂದ ಮಾಡಲಾಗಿದೆ ಎಂದು ರುಜುವಾತುಪಡಿಸಿರುವಲ್ಲಿ ಅಥವಾ ಅದು ಅವರ ಯಾವುದೇ ನಿರ್ಲಕ್ಷ್ಯತೆಯಿಂದ ಆಗಿದೆ ಎಂದು ಹೇಳಬಹುದಾಗಿರುವಲ್ಲಿ ಅಂಥ ನಿರ್ದೇಶಕ, ವ್ಯವಸ್ಥಾಪಕ, ಕಾರ್ಯದರ್ಶಿ ಅಥವಾ ಇತರ ಅಧಿಕಾರಿಯು ಸಹ ಆ ಅಪರಾಧದ ಬಗ್ಗೆ ತಪ್ಪಿತಸ್ಥನಾಗಿರುವುದಾಗಿ ಭಾವಿಸತಕ್ಕುದು ಮತ್ತು ಅವರು ತದನುಸಾರವಾಗಿ ವ್ಯವಹರಣೆಗೆ ಗುರಿಯಾಗತಕ್ಕುದು ಮತ್ತು ದಂಡಿತರಾಗತಕ್ಕುದು.

ವಿವರಣೆ:- ಈ ಪ್ರಕರಣದ ಉದ್ದೇಶಗಳಿಗಾಗಿ,-

(ಎ) 'ಕಂಪನಿ ' ಎಂದರೆ ನಿಗಮಿತ ನಿಕಾಯ ಮತ್ತು ಅದು ಫರ್ಮು ಅಥವಾ ವ್ಯಕ್ತಿಗಳ ಇತರ ಸಂಘವನ್ನು ಒಳಗೊಳ್ಳುತ್ತದೆ; ಮತ್ತು

(ಬಿ) ಫರ್ಮಿಗೆ ಸಂಬಂಧಪಟ್ಟಂತೆ 'ನಿರ್ದೇಶಕ ' ಎಂದರೆ ಫರ್ಮಿನ ಪಾಲುಗಾರ.

**111. ಪ್ರಾಸಿಕ್ಯೂಷನ್‌ಗಳು:-** ಈ ಅಧಿನಿಯಮದಲ್ಲಿ ಅನ್ಯಥಾ ಉಪಬಂಧಿಸಿರುವಂತೆ ಹೊರತು, ಯಾವುದೇ ನ್ಯಾಯಾಲಯವು, ಈ ಬಗ್ಗೆ ಸಾಮಾನ್ಯ ಅಥವಾ ವಿಶೇಷ ಆದೇಶದ ಮೂಲಕ ನೀರು ಸರಬರಾಜು ಇಂಜಿನಿಯರ್, ಸ್ಯಾನಿಟರಿ ಇಂಜಿನಿಯರ್ ಅಥವಾ ಮಂಡಳಿಯು ಅಧಿಕೃತಗೊಳಿಸಿದ ಯಾವನೇ ಅಧಿಕಾರಿಯಿಂದ ಸ್ವೀಕರಿಸಿದ ದೂರು ಅಥವಾ ಮಾಹಿತಿಯ ಮೇಲೆ ಅಲ್ಲದೆ, ಈ ಅಧಿನಿಯಮ ಅಥವಾ ಯಾವುದೇ ನಿಯಮ ಅಥವಾ ವಿನಿಯಮದ ಮೂಲಕ ಅಥವಾ ಅದರ ಮೇರೆಗೆ ದಂಡನೀಯವಾದ ಯಾವುದೇ ಅಪರಾಧದ ಬಗೆಗಿನ ಅಧಿವಿಚಾರಣೆಯನ್ನು ನಡೆಸತಕ್ಕುದಲ್ಲ.

**112. ಅಪರಾಧಗಳ ಬಗ್ಗೆ ರಾಜಿ:-** (1) ಮಂಡಳಿ ಅಥವಾ ಈ ಬಗ್ಗೆ ಸಾಮಾನ್ಯ ಅಥವಾ ವಿಶೇಷ ಆದೇಶದ ಮೂಲಕ ಅದು ಅಧಿಕೃತಗೊಳಿಸಿದ ಮಂಡಳಿಯ ಯಾವನೇ ಅಧಿಕಾರಿಯು ವ್ಯವಹರಣೆಗಳನ್ನು ಹೂಡುವುದಕ್ಕೆ ಮುಂಚಿತವಾಗಿಯೇ ಆಗಲಿ ಅಥವಾ ಆ ತರುವಾಯವೇ ಆಗಲಿ ಈ ಅಧಿನಿಯಮದ ಮೂಲಕ ಅಥವಾ ಅದರ ಮೇರೆಗೆ ದಂಡನೀಯವಾದ ಯಾವುದೇ ಅಪರಾಧವನ್ನು ರಾಜಿ ಮಾಡಿಕೊಳ್ಳಬಹುದು:

ಪರಂತು, ಮಂಡಳಿಯು ಅಥವಾ ಅದರ ಪರವಾಗಿ ಹೊರಡಿಸಿದ ನೋಟೀಸು, ಆದೇಶ ಅಥವಾ ಕಡ್ಡಾಯ ಕೋರಿಕೆಯನ್ನು ಪಾಲಿಸಲು ತಪ್ಪುವ ಮೂಲಕ ಮಾಡಲಾಗಿರುವ ಯಾವುದೇ ಅಪರಾಧವನ್ನು ಅಂಥ ಪಾಲನೆಯನ್ನು ಸಾಧ್ಯವಾಗುವಷ್ಟರ ಮಟ್ಟಿಗೆ ಅದನ್ನು ಪಾಲಿಸುವವರೆಗೆ ರಾಜಿ ಮಾಡಿಕೊಳ್ಳತಕ್ಕುದಲ್ಲ.

(2) ಅಪರಾಧವನ್ನು ರಾಜಿ ಮಾಡಿಕೊಂಡಿರುವಲ್ಲಿ, ಅಪರಾಧಿಯು ಅಭಿರಕ್ಷೆಯಲ್ಲಿದ್ದರೆ ಬಿಡುಗಡೆ ಮಾಡತಕ್ಕುದು ಮತ್ತು ಹಾಗೆ ರಾಜಿ ಮಾಡಿಕೊಂಡಿರುವ ಅಪರಾಧಕ್ಕೆ ಸಂಬಂಧಿಸಿದಂತೆ ಅವನ ವಿರುದ್ಧ ಯಾವುದೇ ಹೆಚ್ಚಿನ ವ್ಯವಹರಣೆಗಳನ್ನು ಕೈಗೊಳ್ಳತಕ್ಕುದಲ್ಲ.

**113. ಅಪರಾಧಿಗಳ ದಸ್ತಗಿರಿ :-** (1) ಮುಖ್ಯ ಇಂಜಿನಿಯರು, ನೀರು ಸರಬರಾಜು ಇಂಜಿನಿಯರ್, ಸ್ಯಾನಿಟರಿ ಇಂಜಿನಿಯರ್, ಮಂಡಲಿಯು ಈ ಬಗ್ಗೆ ಅಧಿಕೃತಗೊಳಿಸಿದ ಯಾವನೇ ಅಧಿಕಾರಿ ಅಥವಾ ಯಾವನೇ ಪೊಲೀಸ್ ಅಧಿಕಾರಿಯು, ಅವನ ಎದುರಿನಲ್ಲಿ ಈ ಅಧಿನಿಯಮ ಅಥವಾ ಅದರ ಮೇರೆಗೆ ರಚಿಸಿದ ಯಾವುದೇ ನಿಯಮ ಅಥವಾ ವಿನಿಯಮದ ವಿರುದ್ಧ ಯಾವುದೇ ಅಪರಾಧವನ್ನು ಮಾಡುವ ಯಾವನೇ ವ್ಯಕ್ತಿಯನ್ನು, -

1. 1966ರ ಅಧಿನಿಯಮ ಸಂಖ್ಯೆ 6ರ ಮೂಲಕ 17.3.1966 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(ಎ) ಅಂಥ ವ್ಯಕ್ತಿಯ ಹೆಸರು ಮತ್ತು ವಿಳಾಸವು ಅವನಿಗೆ ಗೊತ್ತಿಲ್ಲದಿದ್ದರೆ; ಮತ್ತು

(ಬಿ) ತಗಾದೆಯ ಮೇಲೆ ಅಂಥ ವ್ಯಕ್ತಿಯು ತನ್ನ ಹೆಸರು ಮತ್ತು ವಿಳಾಸಗಳನ್ನು ಕೊಡಲು ನಿರಾಕರಿಸಿದರೆ ಅಥವಾ ಅಂಥ ಅಧಿಕಾರಿಯು ಸುಳ್ಳಾಗಿರುವುದಾಗಿ ನಂಬಲು ಕಾರಣವಿರುವಂಥ ಹೆಸರು ಮತ್ತು ವಿಳಾಸವನ್ನು ಕೊಟ್ಟರೆ

- ದಸ್ತಗಿರಿ ಮಾಡಬಹುದು.

(2) ಹಾಗೆ ದಸ್ತಗಿರಿ ಮಾಡಲಾಗಿರುವ ಯಾವನೇ ವ್ಯಕ್ತಿಯನ್ನು, ಅವನ ಸರಿಯಾದ ಹೆಸರು ಮತ್ತು ವಿಳಾಸಗಳನ್ನು ಖಚಿತಪಡಿಸಿಕೊಂಡ ತರುವಾಯ ಅಥವಾ ಅತಿ ಹತ್ತಿರದ ಮ್ಯಾಜಿಸ್ಟ್ರೇಟಿನ ಆದೇಶವಿಲ್ಲದೆ, ದಸ್ತಗಿರಿಯ ಸ್ಥಳದಿಂದ ಅಂಥ ಮ್ಯಾಜಿಸ್ಟ್ರೇಟಿನ ನ್ಯಾಯಾಲಯಕ್ಕೆ ಪ್ರಯಾಣಕ್ಕಾಗಿ ಅವಶ್ಯವಾದ ಕಾಲವನ್ನು ಹೊರತುಪಡಿಸಿ, ದಸ್ತಗಿರಿಯ ಕಾಲದಿಂದ ಇಪ್ಪನ್ನಾಲ್ಕು ಗಂಟೆಗಳಿಗಿಂತ ಹೆಚ್ಚು ಅವಧಿಗಾಗಿ ಅಭಿರಕ್ಷೆಯಲ್ಲಿ ತಡೆಹಿಡಿದಿಟ್ಟಿರತಕ್ಕುದಲ್ಲ.

**114. ಪೊಲೀಸ್ ಅಧಿಕಾರಿಗಳು ಮತ್ತು ನಿಗಮದ ನಿಯೋಜಿತರ ಕರ್ತವ್ಯಗಳು :-** ಈ ಅಧಿನಿಯಮ ಅಥವಾ ಅದರ ಮೇರೆಗೆ ರಚಿಸಿದ ಯಾವುದೇ ನಿಯಮ ಅಥವಾ ವಿನಿಯಮದ ವಿರುದ್ಧ ಯಾವುದೇ ಅಪರಾಧವನ್ನು ಮಾಡುವ ಅಥವಾ ಮಾಡಲು ಪ್ರಯತ್ನಿಸುವ ಬಗ್ಗೆ ಮಂಡಳಿ ಅಥವಾ ಈ ಬಗ್ಗೆ ಅಧಿಕೃತಗೊಳಿಸಿದ ಮಂಡಳಿಯ ಅಧಿಕಾರಿಗಳಿಗೆ ಕೂಡಲೇ ಮಾಹಿತಿಯನ್ನು ಕೊಡುವುದು ಮತ್ತು ಅವರ ಕಾನೂನು ಸಮ್ಮತ ಅಧಿಕಾರವನ್ನು ಚಲಾಯಿಸುವುದರಲ್ಲಿ ಅಂಥ ಎಲ್ಲಾ ಅಧಿಕಾರಿಗಳಿಗೆ ಸಹಾಯ ಮಾಡುವುದು ಎಲ್ಲಾ ಪೊಲೀಸ್ ಅಧಿಕಾರಿಗಳು ಮತ್ತು ಆ ನಿಗಮದ ನಿಯೋಜಿತರ ಕರ್ತವ್ಯವಾಗಿರತಕ್ಕುದು.

**115. ನೋಟೀಸುಗಳು ಮತ್ತು ಇತರ ದಸ್ತಾವೇಜುಗಳ ಸಿಂಧುತ್ವ :-** ಈ ಅಧಿನಿಯಮ ಅಥವಾ ಯಾವುದೇ ನಿಯಮ ಅಥವಾ ವಿನಿಯಮದ ಮೇರೆಗೆ ಹೊರಡಿಸಿದ ಯಾವುದೇ ನೋಟೀಸು, ಆದೇಶ, ಕಡ್ಡಾಯ ಕೋರಿಕೆ, ಲೈಸೆನ್ಸು, ಬರಹದಲ್ಲಿನ ಅನುಮತಿ ಅಥವಾ ಯಾವುದೇ ಇತರ ದಸ್ತಾವೇಜು ಅದರ ಸ್ವರೂಪದ ಬಗ್ಗೆ ದೋಷದ ಕಾರಣದಿಂದ ಮಾತ್ರವೇ ಅಸಿಂಧುವಾಗತಕ್ಕುದಲ್ಲ.

**116. ಸಾಕ್ಷ್ಯವಾಗಿ ದಸ್ತಾವೇಜು ಅಥವಾ ನಮೂದಿನ ಅಂಗೀಕಾರಾರ್ಹತೆ:-** ಮಂಡಳಿಯ ಸ್ವಾಧೀನದಲ್ಲಿರುವ ಯಾವುದೇ ರಸೀದಿ, ಅರ್ಜಿ, ನಕಾಶೆ, ನೋಟೀಸು, ಆದೇಶ ಅಥವಾ ಇತರ ದಸ್ತಾವೇಜಿನ ಅಥವಾ ರಿಜಿಸ್ಟರಿನಲ್ಲಿನ ಯಾವುದೇ ನಮೂದಿನ ಪ್ರತಿಯು, ಅದರ ಕಾನೂನು ಸಮ್ಮತ ರಕ್ಷಕನು ಅಥವಾ ಈ ಬಗ್ಗೆ ಮಂಡಳಿಯು ಅಧಿಕೃತಗೊಳಿಸಿರುವ ಇತರ ವ್ಯಕ್ತಿಯು ಕ್ರಮಬದ್ಧವಾಗಿ ಪ್ರಮಾಣೀಕರಿಸಿದ್ದರೆ, ಆ ದಸ್ತಾವೇಜು ಅಥವಾ ನಮೂದಿನ ಇರುವಿಕೆಯ ಬಗ್ಗೆ ಸಾಕ್ಷ್ಯದಲ್ಲಿ ಅಂಗೀಕಾರಾರ್ಹವಾಗಿರತಕ್ಕುದು, ಮತ್ತು ಅದನ್ನು ಅದರಲ್ಲಿ ದಾಖಲು ಮಾಡಿದ ವಿಷಯಗಳು ಮತ್ತು ವ್ಯವಹಾರಗಳ ಸಾಕ್ಷ್ಯವಾಗಿ, ಅಂಥ ವಿಷಯಗಳು ಮತ್ತು ವ್ಯವಹಾರಗಳನ್ನು ರುಜುವಾತುಪಡಿಸಲು ಆ ಮೂಲ ದಸ್ತಾವೇಜು ಅಥವಾ ನಮೂದನ್ನು ಹಾಜರುಪಡಿಸಿದರೆ, ಅಂಗೀಕಾರರ್ಹವಾಗಿರಬಹುದಾದಷ್ಟರ ಮಟ್ಟಿಗೆ ಪ್ರತಿಯೊಂದು ಪ್ರಕರಣದಲ್ಲಿ ಅಂಗೀಕರಿಸತಕ್ಕುದು.

**117. ಮಂಡಳಿಯ ಅಧಿಕಾರಿಗಳ ಸಾಕ್ಷ್ಯ :-** ಮಂಡಳಿಯ ಯಾವನೇ ಅಧಿಕಾರಿ ಅಥವಾ ನೌಕರನನ್ನು ಆ ಮಂಡಳಿಯು ಪಕ್ಷಕಾರನಾಗಿರದಂಥ ಯಾವುದೇ ಕಾನೂನು ವ್ಯವಹರಣೆಗಳಲ್ಲಿ ಯಾವುದರ ಒಳಾಂಶಗಳನ್ನು 116ನೇ ಪ್ರಕರಣದ ಮೇರೆಗೆ ಪ್ರಮಾಣಿತ ಪ್ರತಿಯ ಮೂಲಕ ರುಜುವಾತುಪಡಿಸಲು ಸಾಧ್ಯವೋ, ಆ ಯಾವುದೇ ರಿಜಿಸ್ಟರು ಅಥವಾ ದಸ್ತಾವೇಜನ್ನು ಹಾಜರುಪಡಿಸಲು, ಅಥವಾ ವಿಶೇಷ ಕಾರಣಕ್ಕಾಗಿ ಮಾಡಿದ ನ್ಯಾಯಾಲಯದ ಆದೇಶದ ಮೂಲಕ ಹೊರತು ಅದರಲ್ಲಿ ದಾಖಲು ಮಾಡಿದ ಯಾವುದೇ ವಿಷಯ ವ್ಯವಹಾರವನ್ನು ರುಜುವಾತುಪಡಿಸುವುದಕ್ಕಾಗಿ ಸಾಕ್ಷಿದಾರನಾಗಿ ಹಾಜರಾಗಲು ಅಗತ್ಯಪಡಿಸತಕ್ಕುದಲ್ಲ.

**118. ಅಧಿಕಾರಗಳ ಪ್ರತ್ಯಾಯೋಜನೆ :-** ಮಂಡಳಿಯು, ಅಧಿಸೂಚನೆಯ ಮೂಲಕ ಈ ಅಧಿನಿಯಮದ ಮೂಲಕ ಅಥವಾ ಅದರ ಮೇರೆಗೆ ನೀರು ಸರಬರಾಜು ಇಂಜಿನಿಯರ್ ಅಥವಾ ಸ್ಯಾನಿಟರಿ ಇಂಜಿನಿಯರನಿಗೆ ಪ್ರದಾನ ಮಾಡಿದ ಯಾವುದೇ ಅಧಿಕಾರ ಅಥವಾ ವಿಧಿಸಿದ ಯಾವುದೇ ಕರ್ತವ್ಯವನ್ನು ಆ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಸಂದರ್ಭಗಳಲ್ಲಿ ಮತ್ತು ಅಂಥ ಷರತ್ತುಗಳು ಯಾವುದಾದರೂ ಇದ್ದರೆ ಅವುಗಳ ಮೇರೆಗೆ ಆ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಿದ ಮಂಡಲಿಯ ಯಾವನೇ ಇತರ ಅಧಿಕಾರಿ ಅಥವಾ ನೌಕರನು ಸಹ ಚಲಾಯಿಸತಕ್ಕುದು ಅಥವಾ ನೆರವೇರಿಸತಕ್ಕುದು ಎಂದು ನಿರ್ದೇಶಿಸಬಹುದು.

**119. ಮುಖ್ಯ ನಿಯಂತ್ರಣ ಪ್ರಾಧಿಕಾರ :-** (1) ಮಂಡಳಿಯು, ಈ ಅಧಿನಿಯಮದ ಆಡಳಿತಕ್ಕೆ ಸಂಬಂಧಪಟ್ಟ ಎಲ್ಲಾ ವಿಷಯಗಳಿಗೆ ಸಂಬಂಧಿಸಿದಂತೆ ಅದು ಮುಖ್ಯ ನಿಯಂತ್ರಣ ಪ್ರಾಧಿಕಾರವಾಗಿರತಕ್ಕುದು ಮತ್ತು ಆ ಉದ್ದೇಶಕ್ಕಾಗಿ ಈ ಬಗ್ಗೆ ಅವಶ್ಯವಾದ ಎಲ್ಲಾ ಅಧಿಕಾರಗಳನ್ನು ಚಲಾಯಿಸಬಹುದು.

(2) ಮುಖ್ಯ ಇಂಜಿನಿಯರ್ ಅಥವಾ ಮಂಡಳಿಯು ಈ ಬಗ್ಗೆ ಅಧಿಸೂಚಿಸಿರುವ ಯಾವನೇ ಇತರ ಅಧಿಕಾರಿ ಅಥವಾ ಅಧಿಕಾರಿಗಳು ಸಹ ಈ ಅಧಿನಿಯಮ ಅಥವಾ ಅದರ ಮೇರೆಗೆ ರಚಿಸಿದ ಯಾವುದೇ ನಿಯಮ ಅಥವಾ ವಿನಿಯಮದ ಮೇರೆಗೆ ಆ ನೀರು ಸರಬರಾಜು ಇಂಜಿನಿಯರ್ ಅಥವಾ ಸ್ಯಾನಿಟರಿ ಇಂಜಿನಿಯರ್ ಚಲಾಯಿಸಬಹುದಾದಂಥ ಯಾವುದೇ ಅಧಿಕಾರವನ್ನು ಚಲಾಯಿಸಬಹುದು ಅಥವಾ ನೆರವೇರಿಸಬಹುದಾದಂಥ ಯಾವುದೇ ಪ್ರಕಾರ್ಯವನ್ನು ನೆರವೇರಿಸಬಹುದು.

**120. ಅಪೀಲುಗಳು :-** ಈ ಅಧಿನಿಯಮ ಅಥವಾ ಅದರ ಮೇರೆಗೆ ರಚಿಸಿದ ಯಾವುದೇ ನಿಯಮ ಅಥವಾ ವಿನಿಯಮದ ಮೇರೆಗೆ ನೀರು ಸರಬರಾಜು ಇಂಜಿನಿಯರ್ ಅಥವಾ ಸ್ಯಾನಿಟರಿ ಇಂಜಿನಿಯರ್ ಅಥವಾ ಇತರ ಅಧಿಕಾರಿಯ ಯಾವುದೇ ತೀರ್ಮಾನ ಅಥವಾ ಆದೇಶದಿಂದ ಬಾಧಿತವಾದ ಯಾವನೇ ವ್ಯಕ್ತಿಯು ಅಂಥ ತೀರ್ಮಾನ ಅಥವಾ ಆದೇಶದ ದಿನಾಂಕದಿಂದ ಅರವತ್ತು ದಿವಸಗಳ ಅವಧಿಯೊಳಗೆ ವಿನಿಯಮಗಳ ಮೂಲಕ ನಿಯಮಿಸಿದ ಪ್ರಾಧಿಕಾರಕ್ಕೆ ಅಪೀಲನ್ನು ಮಾಡಿಕೊಳ್ಳಬಹುದು ಮತ್ತು ಮಂಡಲಿಯಿಂದ ಪುನರೀಕ್ಷಣೆಗೆ ಒಳಪಟ್ಟು ಅಂಥ ಅಪೀಲಿನ ಬಗ್ಗೆ ಅಪೀಲು ಪ್ರಾಧಿಕಾರದ ಆದೇಶಗಳು ಅಂತಿಮವಾಗಿರತಕ್ಕುದು.

**121. ಪುನರೀಕ್ಷಣೆ :–** ಮಂಡಳಿಯು, ಯಾವುದೇ ಆದೇಶ ಅಥವಾ ವ್ಯವಹರಣೆಯ ಕಾನೂನು ಸಮ್ಮತತೆ ಅಥವಾ ಔಚಿತ್ಯದ ಬಗ್ಗೆ ಅದು ಮನದಟ್ಟು ಮಾಡಿಕೊಳ್ಳುವ ಉದ್ದೇಶಕ್ಕಾಗಿ ಅದಕ್ಕೆ ಅಧೀನವಾದ ಯಾವನೇ ಅಧಿಕಾರಿಯ ಯಾವುದೇ ವ್ಯವಹರಣೆಗಳ ದಾಖಲೆಗಳನ್ನು ತರಿಸಿಕೊಳ್ಳಬಹುದು ಮತ್ತು ಅದಕ್ಕೆ ಸಂಬಂಧಿಸಿದಂತೆ ಅದು ಸೂಕ್ತವೆಂದು ಯೋಚಿಸುವಂಥ ಆದೇಶವನ್ನು ಮಾಡಬಹುದು.

**122. ನಿಯಮಗಳು ಮತ್ತು ವಿನಿಯಮಗಳನ್ನು ರಾಜ್ಯ ವಿಧಾನ ಮಂಡಲದ ಮುಂದೆ ಇಡತಕ್ಕುದು, ಇತ್ಯಾದಿ :–** (1) ಈ ಅಧಿನಿಯಮದ ಮೇರೆಗೆ ರಚಿಸಿದ ಪ್ರತಿಯೊಂದು ನಿಯಮ ಅಥವಾ ವಿನಿಯಮ ಮತ್ತು 129ನೇ ಪ್ರಕರಣದ ಮೇರೆಗೆ ರಚಿಸಿದ ಪ್ರತಿಯೊಂದು ಆದೇಶವನ್ನು, ಅದನ್ನು ರಚಿಸಿದ ತರುವಾಯ ಆದಷ್ಟು ಬೇಗನೆ ರಾಜ್ಯ ವಿಧಾನ ಮಂಡಲದ ಪ್ರತಿಯೊಂದು ಸದನದ ಮುಂದೆ ಅದು ಅಧಿವೇಶನದಲ್ಲಿರುವಾಗ ಒಂದು ಅಧಿವೇಶನದಲ್ಲಿ ಅಥವಾ ಎರಡು ಅಥವಾ ಅದಕ್ಕಿಂತ ಹೆಚ್ಚಿನ ಅಧಿವೇಶನಗಳಲ್ಲಿ ಅಡಕವಾಗಬಹುದಾದಂಥ ಒಟ್ಟು ಮೂವತ್ತು ದಿವಸಗಳ ಅವಧಿಗಾಗಿ ಇಡತಕ್ಕುದು ಮತ್ತು ಸದರಿ ಅವಧಿಯು ಮುಕ್ತಾಯವಾಗುವುದಕ್ಕೆ ಮುಂಚೆ ರಾಜ್ಯ ವಿಧಾನ ಮಂಡಲದ ಯಾವುದೇ ಸದನವು ಯಾವುದೇ ನಿಯಮ ಅಥವಾ ವಿನಿಯಮ ಅಥವಾ ಆದೇಶದಲ್ಲಿ ಯಾವುದೇ ಮಾರ್ಪಾಟನ್ನು ಮಾಡಿದರೆ ಅಥವಾ ಯಾವುದೇ ನಿಯಮ ಅಥವಾ ವಿನಿಯಮ ಅಥವಾ ಆದೇಶವು ಪರಿಣಾಮಕಾರಿಯಾಗಿರತಕ್ಕುದಲ್ಲವೆಂದು ನಿರ್ದೇಶಿಸಿದರೆ ಮತ್ತು ಆ ಮಾರ್ಪಾಟು ಅಥವಾ ನಿರ್ದೇಶನಕ್ಕೆ ಇನ್ನೊಂದು ಸದನವು ಒಪ್ಪಿದರೆ, ಆ ತರುವಾಯ ಅಂಥ ನಿಯಮ ಅಥವಾ ವಿನಿಯಮ ಅಥವಾ ಆದೇಶವು ಸಂದರ್ಭಾನುಸಾರ ಅಂಥ ಮಾರ್ಪಾಟಾದ ರೂಪದಲ್ಲಿ ಮಾತ್ರ ಪರಿಣಾಮಕಾರಿಯಾಗಿರತಕ್ಕುದು ಅಥವಾ ಪರಿಣಾಮಕಾರಿಯಾಗಿರತಕ್ಕುದಲ್ಲ.

(2) ಈ ಅಧಿನಿಯಮದ ಮೇರೆಗಿನ ನಿಯಮ ಅಥವಾ ವಿನಿಯಮವನ್ನು ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ರಚಿಸಬಹುದು ಮತ್ತು ಅಂಥ ನಿಯಮ ಅಥವಾ ವಿನಿಯಮವನ್ನು ರಚಿಸಿದಾಗ ಆ ನಿಯಮ ಅಥವಾ ವಿನಿಯಮವನ್ನು ರಚಿಸುವುದಕ್ಕಾಗಿನ ಕಾರಣಗಳನ್ನು ರಾಜ್ಯ ವಿಧಾನಮಂಡಲದ ಎರಡೂ ಸದನಗಳ ಮುಂದೆ ಇಟ್ಟು ನಿರೂಪಣೆಯಲ್ಲಿ ನಿರ್ದಿಷ್ಟಪಡಿಸತಕ್ಕುದು. (1)ನೇ ಉಪಪ್ರಕರಣದ ಮೇರೆಗೆ ರಚಿಸಿದ ಯಾವುದೇ ಮಾರ್ಪಾಡಿಗೆ ಒಳಪಟ್ಟು, ಈ ಅಧಿನಿಯಮದ ಮೇರೆಗೆ ರಚಿಸಿದ ಪ್ರತಿಯೊಂದು ನಿಯಮ ಅಥವಾ ವಿನಿಯಮವು ಈ ಅಧಿನಿಯಮದಲ್ಲಿ ಅಧಿನಿಯಮಿತವಾಗಿದ್ದಿದ್ದರೆ ಹೇಗೋ ಹಾಗೆ ಪರಿಣಾಮಕಾರಿಯಾಗಿರತಕ್ಕುದು.

**123. ನೀರು ಸರಬರಾಜು ಅಥವಾ ಗ್ರಾಮಸಾರ ಚರಂಡಿಯ ಉದ್ಯಮಗಳಿಗೆ ಸಂಬಂಧಿಸಿದಂತೆ ನಿಯೋಜಿತರಾದ ನಿಗಮದ ನಿಯೋಜಿತರ ಬಗ್ಗೆ ಉಪಬಂಧಗಳು :–** (1) IV ನೇ ಅಧ್ಯಾಯ ಅಥವಾ Vನೇ ಅಧ್ಯಾಯವು ಜಾರಿಗೆ ಬಂದಿರುವಂಥ ದಿನಾಂಕದಿಂದ ಪರಿಣಾಮಕಾರಿಯಾಗುವಂತೆ ಸಂದರ್ಭಾನುಸಾರ ನಿಗಮದ ನೀರು ಸರಬರಾಜು ಉದ್ಯಮ ಅಥವಾ ಗ್ರಾಮಸಾರ ಚರಂಡಿ ಉದ್ಯಮಕ್ಕೆ ಸಂಬಂಧಿಸಿದಂತೆ ನಿಯೋಜಿತರಾದ ನಿಗಮದ ಪ್ರತಿಯೊಬ್ಬ ಅಧಿಕಾರಿ ಮತ್ತು ಇತರ ನಿಯೋಜಿತರು ಮಂಡಳಿಗೆ ವರ್ಗಾವಣೆಯಾಗತಕ್ಕುದು ಮತ್ತು ರಾಜ್ಯ ಸರ್ಕಾರವು ನಿರ್ಧರಿಸಬಹುದಾದಂಥ ಪದನಾಮವನ್ನು ಹೊಂದಿರತಕ್ಕುದು ಮತ್ತು ಅವನು ಆ ನಿಗಮದ ಅಧಿಕಾರಿ ಅಥವಾ ಆ ನಿಯೋಜಿತನೆಂದು ಅವನು ಮುಂದುವರಿದಿದ್ದರೆ ಅವನು ಅದನ್ನು ಧಾರಣ ಮಾಡುತ್ತಿದ್ದಂತೆ ಅದೇ ಅವಧಿ, ಅದೇ ಪರಿಶ್ರಮಧನ, ಅದೇ ಸೇವಾ ನಿಬಂಧನೆಗಳು ಮತ್ತು ಷರತ್ತುಗಳ ಮೇರೆಗೆ ಪದಧಾರಣ ಮಾಡತಕ್ಕುದು ಮತ್ತು ಅಂಥ ಅವಧಿ, ಪರಿಶ್ರಮಧನ ಮತ್ತು ನಿಬಂಧನೆಗಳು ಮತ್ತು ಷರತ್ತುಗಳನ್ನು ಮಂಡಳಿಯು ಕ್ರಮಬದ್ಧವಾಗಿ ಬದಲಾವಣೆ ಮಾಡಿದ ಹೊರತು ಮತ್ತು ಅಲ್ಲಿಯವರೆಗೆ ಹಾಗೆ ಮಾಡಲು ಮುಂದುವರೆಯತಕ್ಕುದು:

ಪರಂತು, ಅಂಥ ವರ್ಗಾವಣೆಗೆ ಮುಂಚೆ ನಿಗಮದ ಅಧೀನದಲ್ಲಿ ಅಂಥ ಅಧಿಕಾರಿ ಅಥವಾ ನಿಯೋಜಿತನು ಸಲ್ಲಿಸಿದ ಯಾವುದೇ ಸೇವೆಯನ್ನು ಮಂಡಳಿಯ ಅಧೀನದಲ್ಲಿ ಸಲ್ಲಿಸಿದ ಸೇವೆಯಾಗಿರುವುದಾಗಿ ಭಾವಿಸತಕ್ಕುದು.

(2) ಮಂಡಳಿಯು, (1)ನೇ ಉಪಪ್ರಕರಣದ ಮೇರೆಗೆ ವರ್ಗಾವಣೆ ಮಾಡಿದ ಯಾವನೇ ಅಧಿಕಾರಿ ಅಥವಾ ಇತರ ನಿಯೋಜಿತನನ್ನು ಅದು ಸೂಕ್ತವೆಂದು ಯೋಚಿಸಬಹುದಾದಂಥ ಈ ಅಧಿನಿಯಮದ ಮೇರೆಗಿನ ಅಂಥ ಪ್ರಕಾರ್ಯಗಳನ್ನು ನಿರ್ವಹಿಸುವಲ್ಲಿ ನಿಯೋಗಿಸಿಕೊಳ್ಳಬಹುದು ಮತ್ತು ಅಂಥ ಪ್ರತಿಯೊಬ್ಬ ಅಧಿಕಾರಿ ಅಥವಾ ಇತರ ನಿಯೋಜಿತನು ತದನುಸಾರವಾಗಿ ಆ ಪ್ರಕಾರ್ಯಗಳನ್ನು ನಿರ್ವಹಿಸತಕ್ಕುದು.

**124. ಮಂಡಳಿಯ ಸದಸ್ಯರು, ಅಧಿಕಾರಿಗಳು ಮತ್ತು ನೌಕರರು ಲೋಕನೌಕರರಾಗಿರತಕ್ಕುದು:–** (1) ಮಂಡಳಿಯ ಎಲ್ಲಾ ಸದಸ್ಯರು, ಅಧಿಕಾರಿಗಳು ಮತ್ತು ನೌಕರರನ್ನು ಈ ಅಧಿನಿಯಮದ ಉಪಬಂಧಗಳು ಅಥವಾ ಅದರ ಮೇರೆಗೆ ರಚಿಸಿದ ಯಾವುದೇ ನಿಯಮ ಅಥವಾ ವಿನಿಯಮದ ಅನುಸರಣೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವಾಗ ಅಥವಾ ಕಾರ್ಯನಿರ್ವಹಿಸುತ್ತಿರುವುದಾಗಿ ತಾತ್ಪರ್ಯವಾಗುವ, ತತ್ಕಾಲದಲ್ಲಿ ಜಾರಿಯಲ್ಲಿರುವ ಭಾರತ ದಂಡ ಸಂಹಿತೆ (ಕೇಂದ್ರ ಅಧಿನಿಯಮ 1860ರ 45)ಯ 21ನೇ ಪ್ರಕರಣ ಮತ್ತು ಭ್ರಷ್ಟಾಚಾರ ಪ್ರತಿಬಂಧಕ ಅಧಿನಿಯಮ, 1947 (ಕೇಂದ್ರ ಅಧಿನಿಯಮ 1947ರ 2) ಇದರ ಅರ್ಥವ್ಯಾಪ್ತಿಯೊಳಗೆ ಲೋಕನೌಕರರಾಗಿರುವುದಾಗಿ ಭಾವಿಸತಕ್ಕುದು.

(2) ಭಾರತ ದಂಡ ಸಂಹಿತೆಯ 161ನೇ ಪ್ರಕರಣದಲ್ಲಿನ 'ರಾಜ್ಯ ಸರ್ಕಾರ ' ಮತ್ತು 'ಸರ್ಕಾರ' ಎಂಬ ಪದಗಳು (1)ನೇ ಉಪಪ್ರಕರಣದ ಉದ್ದೇಶಗಳಿಗಾಗಿ ಮಂಡಳಿಯನ್ನು ಒಳಗೊಳ್ಳುವುದೆಂದು ಭಾವಿಸತಕ್ಕುದು.

**125. ಮಂಡಳಿ, ಇತ್ಯಾದಿಯ ಬಗ್ಗೆ ಕ್ರಮದ ಸಂರಕ್ಷಣೆ:–** (1) ಈ ಅಧಿನಿಯಮ ಅಥವಾ ಅದರ ಮೇರೆಗೆ ರಚಿಸಿದ ಯಾವುದೇ ನಿಯಮ ಅಥವಾ ವಿನಿಯಮದ ಮೇರೆಗೆ ಸದ್ಭಾವನೆಯಿಂದ ಮಾಡಿರುವ ಅಥವಾ ಮಾಡಲು ಉದ್ದೇಶಿಸಲಾಗಿರುವಂಥ ಯಾವುದೇ ಕಾರ್ಯಕ್ಕಾಗಿ ಮಂಡಳಿಯ ವಿರುದ್ಧ ಅಥವಾ ಮಂಡಳಿಯ ಯಾವನೇ ಅಧಿಕಾರಿ ಅಥವಾ ನೌಕರನ ವಿರುದ್ಧ ಅಥವಾ ಮಂಡಳಿಯ ಯಾವನೇ ಅಧಿಕಾರಿ ಅಥವಾ ನೌಕರನ ಆದೇಶ ಅಥವಾ ನಿರ್ದೇಶನದ ಮೇರೆಗೆ ಕಾರ್ಯ ನಿರ್ವಹಿಸುತ್ತಿರುವ ಯಾವನೇ ವ್ಯಕ್ತಿಯ ವಿರುದ್ಧ ಯಾವುದೇ ನ್ಯಾಯಾಲಯದಲ್ಲಿ ಯಾವುದೇ ದಾವೆ ಅಥವಾ ಪ್ರಾಸಿಕ್ಯೂಷನನ್ನು ಪುರಸ್ಕರಿಸತಕ್ಕುದಲ್ಲ.

(2) ಮಂಡಳಿಯ ಪೂರ್ವ ಮಂಜೂರಾತಿ ಇಲ್ಲದೆ ಈ ಅಧಿನಿಯಮ ಅಥವಾ ಅದರ ಮೇರೆಗೆ ರಚಿಸಿದ ಯಾವುದೇ ನಿಯಮ ಅಥವಾ ವಿನಿಯಮದ ಮೇರೆಗೆ ಮಾಡಿದ ಅಥವಾ ಮಾಡಲಾಗಿದೆ ಎಂದು ತಾತ್ಪರ್ಯವಾಗುವ ಯಾವುದೇ ಕಾರ್ಯಕ್ಕಾಗಿ ಮಂಡಳಿಯ ಯಾವನೇ ಅಧಿಕಾರಿ ಅಥವಾ ನೌಕರನ ವಿರುದ್ಧ ಯಾವುದೇ ದಾವೆ, ಪ್ರಾಸಿಕ್ಯೂಷನ್ ಅಥವಾ ಇತರ ಕಾನೂನು ವ್ಯವಹರಣೆಯನ್ನು ಹೂಡತಕ್ಕುದಲ್ಲ.

**126. ದಾವೆಗಳ ಬಗ್ಗೆ ನೋಟೀಸನ್ನು ಕೊಡತಕ್ಕುದು :-** ಈ ಅಧಿನಿಯಮ ಅಥವಾ ಅದರ ಮೇರೆಗೆ ರಚಿಸಿದ ಯಾವುದೇ ನಿಯಮ ಅಥವಾ ವಿನಿಯಮದ ಅನುಸರಣೆಯಲ್ಲಿ ಮಾಡಿದ ಅಥವಾ ಮಾಡಲಾಗಿದೆಯೆಂದು ತಾತ್ಪರ್ಯವಾಗುವ ಯಾವುದೇ ಕಾರ್ಯಕ್ಕೆ ಸಂಬಂಧಿಸಿದಂತೆ, ಮಂಡಳಿಯ ವಿರುದ್ಧ ಅಥವಾ ಮಂಡಳಿಯ ಯಾವನೇ ಅಧಿಕಾರಿ ಅಥವಾ ನೌಕರನ ವಿರುದ್ಧ ಅಥವಾ ಮಂಡಳಿ ಅಥವಾ ಯಾವನೇ ಅಧಿಕಾರಿ ಅಥವಾ ಇತರ ನೌಕರನ ಆದೇಶ ಅಥವಾ ನಿರ್ದೇಶನದ ಮೇರೆಗೆ ಕಾರ್ಯ ನಿರ್ವಹಿಸುತ್ತಿರುವ ಯಾವನೇ ವ್ಯಕ್ತಿಯ ವಿರುದ್ಧ ಯಾವದೇ ದಾವೆಯನ್ನು, ಬರಹದಲ್ಲಿನ ನೋಟೀಸನ್ನು ಮಂಡಳಿಯ ಕಚೇರಿಯಲ್ಲಿ ಬಿಟ್ಟ ತರುವಾಯ ಎರಡು ತಿಂಗಳುಗಳು ಮುಕ್ತಾಯವಾಗುವವರೆಗೆ ಮತ್ತು ಅಂಥ ಅಧಿಕಾರಿ, ನೌಕರ ಅಥವಾ ವ್ಯಕ್ತಿಯ ಸಂದರ್ಭದಲ್ಲಿ, ಬರಹದಲ್ಲಿನ ನೋಟೀಸನ್ನು ಸಹ ಅವನಿಗೆ ವಶಾವಣೆ ಮಾಡಿದ್ದ ಹೊರತು ಅಥವಾ ಅದನ್ನು ಅವನ ಕಚೇರಿ ಅಥವಾ ಆ ವಾಸಸ್ಥಳದಲ್ಲಿ ಬಿಟ್ಟಿದ್ದ ಹೊರತು, ಮತ್ತು ಅಂಥ ನೋಟೀಸು ಸ್ಪಷ್ಟವಾಗಿ ವ್ಯಾಜ್ಯದ ಕಾರಣ, ಕೋರಿರುವ ಪರಿಹಾರದ ಸ್ವರೂಪ, ಕ್ಲೇಮು ಮಾಡಿದ ನಷ್ಟ ಪರಿಹಾರದ ಮೊಬಲಗು ಮತ್ತು ಉದ್ದೇಶಿಸುವ ವಾದಿಯ ಹೆಸರು ಮತ್ತು ವಾಸಸ್ಥಳ ಇವುಗಳನ್ನು ನಿರೂಪಿಸುವ ಹೊರತು, ಮತ್ತು ಆ ವಾದಪತ್ರವು ಅಂಥ ನೋಟೀಸನ್ನು ಹಾಗೆ ಬಿಡಲಾಗಿದೆ ಅಥವಾ ವಶಾವಣೆ ಮಾಡಲಾಗಿದೆಯೆಂಬ ನಿರೂಪಣೆಯನ್ನು ಒಳಗೊಂಡಿದ್ದ ಹೊರತು ಹೂಡತಕ್ಕುದಲ್ಲ.

(2) (1)ನೇ ಉಪಪ್ರಕರಣದಲ್ಲಿರುವುದು ಯಾವುದೂ, ಯಾವುದರ ಉದ್ದೇಶವು ನೋಟೀಸನ್ನು ಕೊಡುವುದರ ಅಥವಾ ಆ ದಾವೆಯನ್ನು ಹೂಡುವಿಕೆಯನ್ನು ಮುಂದೂಡುವುದರ ಮೂಲಕ ವಿಫಲಗೊಳ್ಳುವುದೋ, ಆ ನಿರ್ಬಂಧಕಾಜ್ಞೆಯನ್ನು ಕ್ಲೇಮು ಮಾಡಿದ ಒಂದೇ ಪರಿಹಾರವಾಗಿರುವಂಥ ದಾವೆಗೆ ಅನ್ವಯಿಸುವುದಾಗಿ ಭಾವಿಸತಕ್ಕುದಲ್ಲ.

**127. ನೇಮಕಾತಿಗಳು, ಅಧಿಸೂಚನೆಗಳು, ನಿಯಮಗಳು, ಉಪನಿಧಿಗಳು, ಇತ್ಯಾದಿಗಳ ಮುಂದುವರಿಕೆ :-** (1) IV ನೇ ಅಧ್ಯಾಯವು ಜಾರಿಗೆ ಬರುವಂಥ ದಿನಾಂಕದಿಂದ ಪರಿಣಾಮಕಾರಿಯಾಗಿರುವಂತೆ,-

(ಎ) ಅದು ನೀರು ಸರಬರಾಜು ಉದ್ಯಮಕ್ಕೆ ಸಂಬಂಧಪಡುವಷ್ಟರ ಮಟ್ಟಿಗೆ ಬೆಂಗಳೂರು ನಗರ ಪೌರ ನಿಗಮ ಅಧಿನಿಯಮ, 1949ರ ಮೇರೆಗೆ ಮಾಡಿದ ಅಥವಾ ಹೊರಡಿಸಿದ ಯಾವುದೇ ನೇಮಕಾತಿ, ಅಧಿಸೂಚನೆ, ಆದೇಶ, ಯೋಜನೆ, ನಿಯಮ, ಉಪನಿಧಿ, ನಮೂನೆ ಅಥವಾ ನೋಟೀಸು ಮತ್ತು ಅದರ ಮೇರೆಗೆ ಕೊಟ್ಟ ಯಾವುದೇ ಲೈಸೆನ್ಸು ಅಥವಾ ಅನುಮತಿಯು ಜಾರಿಯಲ್ಲಿರುವುದು ಮುಂದುವರಿಯತಕ್ಕುದು ಮತ್ತು ಅವುಗಳನ್ನು ಈ ಅಧಿನಿಯಮದ ಉಪಬಂಧಗಳ ಮೇರೆಗೆ ಮಾಡಿದ ಅಥವಾ ಹೊರಡಿಸಿದ ಯಾವುದೇ ನೇಮಕಾತಿ, ಅಧಿಸೂಚನೆ, ಆದೇಶ, ಯೋಜನೆ, ನಿಯಮ, ವಿನಿಯಮ, ನಮೂನೆ ಅಥವಾ ನೋಟೀಸು ಅಥವಾ ಕೊಟ್ಟ ಯಾವುದೇ ಲೈಸೆನ್ಸು ಅಥವಾ ಅನುಮತಿಯ ಮೂಲಕ ಅದನ್ನು ರದ್ದುಗೊಳಿಸಿದ ಹೊರತು ಮತ್ತು ಅಲ್ಲಿಯವರೆಗೆ ಈ ಅಧಿನಿಯಮದ ಉಪಬಂಧಗಳ ಮೇರೆಗೆ ಮಾಡಲಾಗಿದೆ, ಹೊರಡಿಸಲಾಗಿದೆ ಅಥವಾ ಕೊಡಲಾಗಿದೆಯೆಂದು ಭಾವಿಸತಕ್ಕುದು;

(ಬಿ) ಆ ನೀರು ಸರಬರಾಜು ಉದ್ಯಮಕ್ಕೆ ಸಂಬಂಧಿಸಿದಂತೆ ನಿಗಮದ ಮೂಲಕ, ಅದರೊಂದಿಗೆ ಅಥವಾ ಅದಕ್ಕಾಗಿ ವಹಿಸಿದ ಎಲ್ಲಾ ಬಾಧ್ಯತೆಗಳು ಮತ್ತು ಹೊಣೆಗಾರಿಕೆಗಳು, ಮಾಡಿಕೊಂಡ ಎಲ್ಲಾ ಕರಾರುಗಳು, ಮಾಡಬೇಕೆಂದು ವಚನಬದ್ಧ ಮಾಡಿಕೊಂಡ ಎಲ್ಲಾ ವಿಷಯಗಳು ಮತ್ತು ಕಾರ್ಯಗಳನ್ನು ಮಂಡಳಿಯ ಮೂಲಕ, ಅದರೊಂದಿಗೆ ಅಥವಾ ಅದಕ್ಕಾಗಿ ವಹಿಸಲಾಗಿದೆ, ಮಾಡಿಕೊಳ್ಳಲಾಗಿದೆ ಅಥವಾ ಮಾಡಬೇಕೆಂದು ವಚನಬದ್ಧ ಮಾಡಿಕೊಳ್ಳಲಾಗಿದೆ ಎಂದು ಭಾವಿಸತಕ್ಕುದು;

(ಸಿ) ನಿಗಮದಲ್ಲಿ ನಿಹಿತವಾದ ಚರ ಮತ್ತು ಸ್ಥಿರ ಎಲ್ಲಾ ಸ್ವತ್ತು ಮತ್ತು ಯಾವುದೇ ಸ್ವರೂಪ ಮತ್ತು ಬಗೆಯ ಎಲ್ಲಾ ಹಿತಾಸಕ್ತಿಗಳು, ಅವುಗಳು ನೀರು ಸರಬರಾಜು ಉದ್ಯಮಕ್ಕೆ ಸಂಬಂಧಪಡುವಷ್ಟರ ಮಟ್ಟಿಗೆ, ಆ ನೀರು ಸರಬರಾಜು ಉದ್ಯಮಕ್ಕೆ ಸಂಬಂಧಿಸಿದಂತೆ ನಿಗಮವು ಬಳಸಿದ, ಉಪಭೋಗಿಸಿದ ಅಥವಾ ಹೊಂದಿರುವ ಯಾವುದೇ ವಿವರಣೆಯ ಎಲ್ಲಾ ಹಕ್ಕುಗಳೊಂದಿಗೆ ಮಂಡಳಿಯಲ್ಲಿ ನಿಹಿತಗೊಳ್ಳತಕ್ಕುದು;

(ಡಿ) ಆ ನೀರು ಸರಬರಾಜು ಉದ್ಯಮಕ್ಕೆ ಸಂಬಂಧಿಸಿದಂತೆ ನಿಗಮಕ್ಕೆ ಬಾಕಿಯಾದ ಎಲ್ಲಾ ದರಗಳು, ಫೀಜುಗಳು, ಬಾಡಿಗೆಗಳು ಮತ್ತು ಇತರ ಹಣದ ಮೊತ್ತಗಳು ಮಂಡಳಿಗೆ ಬಾಕಿಯಾಗಿರುವುದಾಗಿ ಭಾವಿಸತಕ್ಕುದು; ಅಥವಾ

(ಇ) ನಿಗಮವು ಅದರ ವಿರುದ್ಧ ಹೂಡಿರುವ ಅಥವಾ ಹೂಡಬಹುದಾಗಿದ್ದಂಥ ಎಲ್ಲಾ ದಾವೆಗಳು, ಪ್ರಾಸಿಕ್ಯೂಷನ್‌ಗಳು ಮತ್ತು ಇತರ ಕಾನೂನು ವ್ಯವಹರಣೆಗಳನ್ನು ಅವುಗಳು ಆ ನೀರು ಸರಬರಾಜು ಉದ್ಯಮಕ್ಕೆ ಸಂಬಂಧಪಡುವಷ್ಟರ ಮಟ್ಟಿಗೆ ಮಂಡಳಿಯು ಅದರ ವಿರುದ್ಧ ಮುಂದುವರಿಸಬಹುದು ಅಥವಾ ಮಾಡಬಹುದು.

(2) Vನೇ ಅಧ್ಯಾಯವು ಜಾರಿಗೆ ಬರುವಂಥ ದಿನಾಂಕದಿಂದ ಪರಿಣಾಮಕಾರಿಯಾಗುವಂತೆ,-

(ಎ) ಬೆಂಗಳೂರು ನಗರದ ಪೌರ ನಿಗಮ ಅಧಿನಿಯಮ, 1949 ಇದರ ಮೇರೆಗೆ ಮಾಡಿದ ಅಥವಾ ಹೊರಡಿಸಿದ ಯಾವುದೇ ನೇಮಕಾತಿ, ಅಧಿಸೂಚನೆ, ಆದೇಶ, ಯೋಜನೆ, ನಿಯಮ, ಉಪನಿಧಿ, ನಮೂನೆ ಅಥವಾ ನೋಟೀಸು ಮತ್ತು ಅದರ ಮೇರೆಗೆ ಕೊಟ್ಟಿರುವ ಯಾವುದೇ ಲೈಸೆನ್ಸ್ ಅಥವಾ ಅನುಮತಿ ಅದು ಆ ಗ್ರಾಮಸಾರ ಉದ್ಯಮಕ್ಕೆ ಸಂಬಂಧಪಡುವಷ್ಟರ ಮಟ್ಟಿಗೆ, ಈ ಅಧಿನಿಯಮದ

ಉಪಬಂಧಗಳ ಮೇರೆಗೆ ಮಾಡಿರುವ ಅಥವಾ ಹೊರಡಿಸಿರುವ ಯಾವುದೇ ನೇಮಕಾತಿ, ಅಧಿಸೂಚನೆ, ಆದೇಶ, ಯೋಜನೆ, ನಿಯಮ, ವಿನಿಯಮ, ನಮೂನೆ ಅಥವಾ ನೋಟೀಸು ಅಥವಾ ಅದರ ಮೇರೆಗೆ ಕೊಟ್ಟ ಯಾವುದೇ ಲೈಸೆನ್ಸ್ ಅಥವಾ ಅನುಮತಿಯ ಮೂಲಕ ಅದನ್ನು ರದ್ದುಗೊಳಿಸಿದ ಹೊರತು ಮತ್ತು ಅಲ್ಲಿಯವರೆಗೆ, ಜಾರಿಯಲ್ಲಿರುವುದು ಮುಂದುವರೆಯತಕ್ಕುದು ಮತ್ತು ಈ ಅಧಿನಿಯಮದ ಉಪಬಂಧಗಳ ಮೇರೆಗೆ ಅವುಗಳನ್ನು ಮಾಡಿರುವುದಾಗಿ, ಹೊರಡಿಸಿರುವುದಾಗಿ ಅಥವಾ ಕೊಟ್ಟಿರುವುದಾಗಿ ಭಾವಿಸತಕ್ಕುದು;

(ಬಿ) ಆ ಗ್ರಾಮಸಾರ ಉದ್ಯಮಕ್ಕೆ ಸಂಬಂಧಿಸಿದಂತೆ, ನಿಗಮವು, ಅದರೊಂದಿಗೆ ಅಥವಾ ಅದಕ್ಕಾಗಿ ವಹಿಸಿದ ಎಲ್ಲಾ ಬಾಧ್ಯತೆಗಳು ಮತ್ತು ಹೊಣೆಗಾರಿಕೆಗಳು, ಮಾಡಿಕೊಂಡ ಎಲ್ಲಾ ಕರಾರುಗಳು, ವಚನಬದ್ಧ ಮಾಡಿಕೊಂಡ ಎಲ್ಲಾ ವಿಷಯಗಳು ಮತ್ತು ಕಾರ್ಯಗಳನ್ನು ಮಂಡಳಿಯು, ಅವರೊಂದಿಗೆ ಅಥವಾ ಅದಕ್ಕಾಗಿ ವಹಿಸಿರುವುದಾಗಿ, ಮಾಡಿಕೊಂಡಿರುವುದಾಗಿ ಅಥವಾ ವಚನಬದ್ಧಗೊಳಿಸಿರುವುದಾಗಿ ಭಾವಿಸತಕ್ಕುದು;

(ಸಿ) ನಿಗಮದಲ್ಲಿ ನಿಹಿತವಾದ ಚರ ಮತ್ತು ಸ್ಥಿರ ಎಲ್ಲಾ ಸ್ವತ್ತು ಮತ್ತು ಯಾವುದೇ ಸ್ವರೂಪ ಮತ್ತು ಬಗೆಯ ಎಲ್ಲಾ ಹಿತಾಸಕ್ತಿಗಳು ಅವುಗಳು ಗ್ರಾಮಸಾರ ಉದ್ಯಮಕ್ಕೆ ಸಂಬಂಧಪಡುವಷ್ಟರ ಮಟ್ಟಿಗೆ, ಆ ಗ್ರಾಮಸಾರ ಉದ್ಯಮಕ್ಕೆ ಸಂಬಂಧಿಸಿದಂತೆ ನಿಗಮವು ಬಳಿಸಿದ, ಉಪಭೋಗಿಸಿದ ಅಥವಾ ಹೊಂದಿರುವ ಯಾವುದೇ ವಿವರಣೆಯ ಎಲ್ಲಾ ಹಕ್ಕುಗಳೊಂದಿಗೆ ಮಂಡಳಿಯಲ್ಲಿ ನಿಹಿತಗೊಳ್ಳತಕ್ಕುದು;

(ಡಿ) ಆ ಗ್ರಾಮಸಾರ ಉದ್ಯಮಕ್ಕೆ ಸಂಬಂಧಿಸಿದಂತೆ ನಿಗಮಕ್ಕೆ ಬಾಕಿಯಾದ ಎಲ್ಲಾ ದರಗಳು, ಫೀಜುಗಳು, ಬಾಡಿಗೆಗಳು ಮತ್ತು ಇತರ ಹಣದ ಮೊತ್ತಗಳು ಮಂಡಳಿಗೆ ಬಾಕಿಯಾಗಿರುವುದಾಗಿ ಭಾವಿಸತ್ಕಕುದು;

(ಇ) ನಿಗಮದ ಅಥವಾ ಅದರ ವಿರುದ್ಧ ಮಾಡಿರುವಂಥ ಅಥವಾ ಹೂಡಬಹುದಾಗಿದ್ದಂಥ ಎಲ್ಲಾ ದಾವೆಗಳು, ಪ್ರಾಸಿಕ್ಯೂಷನ್‌ಗಳು ಮತ್ತು ಇತರ ಕಾನೂನು ವ್ಯವಹರಣೆಗಳನ್ನು ಅವುಗಳು ಆ ಗ್ರಾಮಸಾರ ಉದ್ಯಮಕ್ಕೆ ಸಂಬಂಧಪಡುವಷ್ಟರ ಮಟ್ಟಿಗೆ ಮಂಡಳಿಯು ಅಥವಾ ಅದರ ವಿರುದ್ಧ ಮುಂದುವರಿಸಬಹುದು ಅಥವಾ ಮಾಡಬಹುದು.

**128. ಮೈಸೂರು ಅಧಿನಿಯಮ, 1949ರ LXIXರ ತಿದ್ದುಪಡಿ:-** (1) IV ನೇ ಅಧ್ಯಾಯವು ಜಾರಿಗೆ ಬರುವಂಥ ದಿನಾಂಕದಿಂದ, ಬೆಂಗಳೂರು ನಗರ ಪೌರ ನಿಗಮ ಅಧಿನಿಯಮ, 1949 ಇದು ಈ ಕೆಳಕಂಡ ತಿದ್ದುಪಡಿಗಳಿಗೆ ಒಳಪಟ್ಟು ಪರಿಣಾಮಕಾರಿಯಾಗತಕ್ಕುದು, ಎಂದರೆ:-

(i) 171, 172, 173, 174, 175, 176, 177, 178, 179, 180, 181 ಮತ್ತು 182ನೇ ಪ್ರಕರಣಗಳನ್ನು ಲೋಪಿಸತಕ್ಕುದು;

(ii) 367ನೇ ಪ್ರಕರಣದಲ್ಲಿ,-

(ಎ) (5)ನೇ ಖಂಡದಲ್ಲಿ, (ಎ) ಉಪಖಂಡಕ್ಕೆ ಬದಲಾಗಿ ಈ ಕೆಳಕಂಡ ಉಪಖಂಡವನ್ನು ಪ್ರತಿಯೋಜಿಸತಕ್ಕುದು, ಎಂದರೆ:-

"(ಎ) ಸಾರ್ವಜನಿಕ ಕೆರೆಗಳು, ಬಾವಿಗಳು, ನಳಿಕೆಗಳು ಅಥವಾ ಇತರ ಕಾಮಗಾರಿಗಳಿಂದ ನೀರಿನ ಉಪಯೋಗಕ್ಕಾಗಿ, ಅವುಗಳ ಉಪಯೋಗಕ್ಕಾಗಿ"; ಮತ್ತು

(ಸಿ), (ಡಿ), (ಇ), (ಎಫ್), (ಜಿ), (ಹೆಚ್) ಮತ್ತು (ಐ) ಉಪಖಂಡಗಳನ್ನು ಲೋಪಿಸತಕ್ಕುದು;

(ಬಿ) (7)ನೇ ಖಂಡದಲ್ಲಿ, (ಇ) ಉಪಖಂಡದಲ್ಲಿ, "ಮುಚ್ಚಿದ ರೊಚ್ಚುಗುಂಡಿಗಳು ಮತ್ತು" ಎಂಬ ಪದಗಳನ್ನು ಲೋಪಿಸತಕ್ಕುದು ಮತ್ತು (ಎಫ್) ಉಪಖಂಡದಲ್ಲಿ, "ಕೊಳವೆಗಳು ಅಥವಾ" ಪದಗಳನ್ನು ಲೋಪಿಸತಕ್ಕುದು.

(2) Vನೇ ಅಧ್ಯಾಯವು ಜಾರಿಗೆ ಬರುವಂಥ ದಿನಾಂಕದಿಂದ ಪರಿಣಾಮಕಾರಿಯಾಗಿರುವಂತೆ ಬೆಂಗಳೂರು ನಗರ ಪೌರ ನಿಗಮ ಅಧಿನಿಯಮ, 1949 ಇದರ ಈ ಕೆಳಕಂಡ ತಿದ್ದುಪಡಿಗಳಿಗೆ ಒಳಪಟ್ಟು, ಪರಿಣಾಮಕಾರಿಯಾಗಿರತಕ್ಕುದು, ಎಂದರೆ,-

(i) 184ನೇ ಪ್ರಕರಣದಲ್ಲಿ "ಸಾರ್ವಜನಿಕ ಚರಂಡಿಗಳು, ಕೊಳವೆಗಳು ಮತ್ತು ಚರಂಡಿ ವ್ಯವಸ್ಥಾ ಕಾಮಗಾರಿಗಳು " ಎಂಬ ಪದಗಳಿಗೆ ಬದಲಾಗಿ "ಸಾರ್ವಜನಿಕ ಮೇಲ್ಮೈ ಚರಂಡಿಗಳು ಮತ್ತು ಅವುಗಳಿಗೆ ಸಂಬಂಧಿಸಿದ ಚರಂಡಿ ವ್ಯವಸ್ಥೆ ಕಾಮಗಾರಿಗಳು " ಎಂಬ ಪದಗಳನ್ನು ಪ್ರತಿಯೋಜಿಸತಕ್ಕುದು;

(ii) 187ನೇ ಪ್ರಕರಣದಲ್ಲಿ ,-

(ಎ) (1) ಮತ್ತು (2)ನೇ ಉಪಪ್ರಕರಣಗಳಲ್ಲಿ "ಸಾರ್ವಜನಿಕ ಚರಂಡಿ " ಎಂಬ ಪದಗಳಿಗೆ ಬದಲಾಗಿ "ಸಾರ್ವಜನಿಕ ಮೇಲ್ಮೈ ಚರಂಡಿ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕುದು;

(ಬಿ) (3) ಮತ್ತು (4)ನೇ ಉಪಪ್ರಕರಣಗಳನ್ನು ಲೋಪಿಸತಕ್ಕುದು;

(iii) 188 ಮತ್ತು 189ನೇ ಪ್ರಕರಣಗಳಲ್ಲಿ "ಸಾರ್ವಜನಿಕ ಚರಂಡಿ" ಎಂಬ ಪದಗಳಿಗೆ ಬದಲಾಗಿ "ಸಾರ್ವಜನಿಕ ಮೇಲ್ಮೈ ಚರಂಡಿ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕುದು;

(IV) 199ನೇ ಪ್ರಕರಣದಲ್ಲಿ "ನೀರು ಸರಬರಾಜು " ಎಂಬ ಪದಗಳನ್ನು ಲೋಪಿಸತಕ್ಕುದು;

(V) 368ನೇ ಪ್ರಕರಣದಲ್ಲಿ, "ಮತ್ತು - - ಗೆ ನೀರಿನ ಸರಬರಾಜು " ಮತ್ತು "ಮತ್ತು ಕಟ್ಟಡಗಳಿಗೆ ಸಂಬಂಧಿಸಿದಂತೆ ಶೌಚಗೃಹಗಳು, ಭೂ ಶೌಚಗೃಹಗಳು, ಕಕ್ಕಸುಗಳು, ಭೂದಿಗುಂಡಿಗಳು ಮತ್ತು ರೊಚ್ಚುಗುಂಡಿ ಮತ್ತು ನೀರುಹರಿಸಿ ಸ್ವಚ್ಛಗೊಳಿಸುವುದಕ್ಕಾಗಿ ಸಾಕಷ್ಟು ನೀರನ್ನು ಸರಬರಾಜು ಮಾಡಿರುವ ಶೌಚಗೃಹಗಳನ್ನು ಇಡುವುದು " ಎಂಬ ಪದಗಳನ್ನು ಲೋಪಿಸತಕ್ಕುದು.

(3) (1)ನೇ ಉಪಪ್ರಕರಣ ಅಥವಾ (2)ನೇ ಉಪಪ್ರಕರಣದ ಮೂಲಕ ಬೆಂಗಳೂರು ನಗರ ಪೌರ ನಿಗಮ ಅಧಿನಿಯಮ, 1949ರ ಉಪಬಂಧಗಳಿಗೆ ತಿದ್ದುಪಡಿಗಳನ್ನು ಮಾಡಿದ್ದಾಗ್ಯೂ ನೀರು ತೆರಿಗೆ ಅಥವಾ ನೈರ್ಮಲ್ಯ ಉಪಕರವೆಂದು ನಿಗಮಕ್ಕೆ ಸಂದಾಯ ಮಾಡಬೇಕಾದ ಸ್ವತ್ತು ತೆರಿಗೆಯನ್ನು ಈ ಅಧಿನಿಯಮದ Vನೇ ಅಧ್ಯಾಯವು ಜಾರಿಗೆ ಬರುವುದಕ್ಕೆ ಮುಂಚೆ ಯಾವ ವರ್ಷಕ್ಕಾಗಿ ಅಂಥ ತೆರಿಗೆ ಅಥವಾ ಉಪಕರವನ್ನು ಸಂದಾಯ ಮಾಡಬೇಕಾಗಿದ್ದಿತೋ ಆ ವರ್ಷಕ್ಕೆ ಸಂಬಂಧಿಸಿದಂತೆ ನಿಗಮಕ್ಕೆ ಸಂದಾಯ ಮಾಡುವುದು ಮುಂದುವರಿಯತಕ್ಕುದು.

(4) ಬೆಂಗಳೂರು ನಗರ ಪೌರ ನಿಗಮ ಅಧಿನಿಯಮ, 1949 ಇದರಲ್ಲಿ ಏನೇ ಅಡಕವಾಗಿದ್ದಾಗ್ಯೂ, ಈ ಅಧಿನಿಯಮದ IVನೇ ಅಧ್ಯಾಯವು ಜಾರಿಗೆ ಬಂದ ತರುವಾಯ, ನಿಗಮವು ಮಂಡಳಿಗೆ ರಾಜ್ಯ ಸರ್ಕಾರವು ಆದೇಶದ ಮೂಲಕ ನಿರ್ದಿಷ್ಟಪಡಿಸಬಹುದಾದಂತೆ ಅಂಥ ವರ್ಷಗಳಲ್ಲಿ ನೀರು ತೆರಿಗೆ ಎಂದು ಸಂಗ್ರಹಿಸಿದ ಸ್ವತ್ತು ತೆರಿಗೆಯ ಅಂಥ ಶೇಕಡಾವಾರನ್ನು ಸಂದಾಯ ಮಾಡತಕ್ಕುದು.

**129. ಈ ಅಧಿನಿಯಮವನ್ನು ಜಾರಿಗೊಳಿಸುವುದಕ್ಕಾಗಿನ ಆದೇಶಗಳು :-** (1) ಈ ಅಧಿನಿಯಮ ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಇತರ ಕಾನೂನಿನಲ್ಲಿ ಏನೇ ಅಡಕವಾಗಿದ್ದಾಗ್ಯೂ, ರಾಜ್ಯ ಸರ್ಕಾರವು, ರಾಜಪತ್ರದಲ್ಲಿ ಪ್ರಕಟಿಸಿದ ಆದೇಶದ ಮೂಲಕ,-

(ಎ) ಈ ಅಧಿನಿಯಮದ ಉಪಬಂಧಗಳನ್ನು ಪರಿಣಾಮಕಾರಿಯಾಗಿ ಜಾರಿಗೊಳಿಸುವುದಕ್ಕಾಗಿ;

(ಬಿ) ಈ ಅಧಿನಿಯಮದ ಉಪಬಂಧಗಳನ್ನು ಜಾರಿಗೊಳಿಸುವ ಉದ್ದೇಶಕ್ಕಾಗಿ 127ನೇ ಪ್ರಕರಣದ (1)ನೇ ಉಪಪ್ರಕರಣದ (ಎ) ಖಂಡ ಅಥವಾ 127ನೇ ಪ್ರಕರಣದ (2)ನೇ ಉಪಪ್ರಕರಣದ (ಎ) ಖಂಡದಲ್ಲಿ ಉಲ್ಲೇಖಿಸಿದ ನಿಯಮಗಳು, ಉಪನಿಧಿಗಳು, ಅಧಿಸೂಚನೆಗಳು ಮತ್ತು ಆದೇಶಗಳು ಇವುಗಳಿಂದ ಲೋಪಿಸುವುದು, ಅವುಗಳಿಗೆ ಸೇರ್ಪಡೆ ಮಾಡುವುದು ಮತ್ತು ಅವುಗಳನ್ನು ಅಳವಡಿಸಿಕೊಳ್ಳುವುದು ಮತ್ತು ಅವುಗಳಿಗೆ ಮಾರ್ಪಾಟುಗಳನ್ನು ಮಾಡುವುದಕ್ಕಾಗಿ;

(ಸಿ) ಯಾವುದೇ ಕಾನೂನಿನಲ್ಲಿ ನಿಗಮ ಅಥವಾ ಇತರ ಪ್ರಾಧಿಕಾರಗಳಿಗೆ ಮಾಡಿದ ಉಲ್ಲೇಖಗಳನ್ನು ಅರ್ಥೈಸುವಲ್ಲಿನ ತೊಂದರೆಗಳನ್ನು ಒಳಗೊಂಡು ಈ ಅಧಿನಿಯಮದ ಉಪಬಂಧಗಳಿಗೆ ಪರಿವರ್ತನೆ ಹೊಂದುವುದಕ್ಕೆ ಸಂಬಂಧಿಸಿದಂತೆ ಉದ್ಭವಿಸುವ ತೊಂದರೆಗಳನ್ನು ನಿವಾರಿಸುವುದಕ್ಕಾಗಿ;

(ಡಿ) ನಿಗಮವು ನಡೆಸುತ್ತಿರುವ ಸೇವೆಗಳು ಮತ್ತು ಚಟುವಟಿಕೆಗಳನ್ನು ಮಂಡಲಿಯು ತತ್ಕಾಲದಲ್ಲಿ ನಡೆಸುವುದನ್ನು, ಮುಂದುವರೆಸುವುದನ್ನು ಅಧಿಕೃತಗೊಳಿಸುವುದಕ್ಕಾಗಿ; ಮತ್ತು

(ಇ) ಹಿಂದೆ ಹೇಳಿದ ಯಾವುದೇ ವಿಷಯಕ್ಕೆ ಸಂಬಂಧಿಸಿದಂತೆ, ಅವಶ್ಯ ಅಥವಾ ವಿಹಿತವೆಂದು ಕಂಡುಬರುವಷ್ಟರ ಮಟ್ಟಿಗೆ ಯಾವುದೇ ಪ್ರಾಧಿಕಾರದ ಅಧಿಕಾರಗಳು ಅಥವಾ ಅಧಿಕಾರ ವ್ಯಾಪ್ತಿಯನ್ನು ಬದಲಾಯಿಸುವುದು ಮತ್ತು ಅಂಥ ಆದೇಶದಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಅಧಿಕಾರ ವ್ಯಾಪ್ತಿಯನ್ನು ಚಲಾಯಿಸಲು ಇತರ ಪ್ರಾಧಿಕಾರಗಳನ್ನು ಶಕ್ತಗೊಳಿಸುವುದಕ್ಕಾಗಿ

- ಅದಕ್ಕೆ ಅವಶ್ಯ ಅಥವಾ ವಿಹಿತವೆಂದು ಕಂಡುಬರುವಂಥ ಉಪಬಂಧಗಳನ್ನು ಮಾಡಬಹುದು.

(2) (1)ನೇ ಉಪಪ್ರಕರಣದ ಮೇರೆಗಿನ ಯಾವುದೇ ಆದೇಶದ ಮೂಲಕ ಮಾಡಿದ ಉಪಬಂಧಗಳು 1822ನೇ ಪ್ರಕರಣದ ಉಪಬಂಧಗಳಿಗೆ ಒಳಪಟ್ಟು, ಈ ಅಧಿನಿಯಮದಲ್ಲಿ ಅಧಿನಿಯಮಿತವಾಗಿದ್ದಿದ್ದರೆ ಹೇಗೋ ಹಾಗೆ ಪರಿಣಾಮಕಾರಿಯಾಗಿರತಕ್ಕುದು ಮತ್ತು ಯಾವುದೇ ಅಂಥ ಆದೇಶವನ್ನು ಈ ಅಧ್ಯಾಯದ ಪ್ರಾರಂಭದ ದಿನಾಂಕಕ್ಕಿಂತ ಮುಂಚಿನದಲ್ಲದ ಯಾವುದೇ ದಿನಾಂಕಕ್ಕೆ ಪೂರ್ವಾನ್ವಯವಾಗುವ ಹಾಗೆ ಮಾಡಬಹುದು:

ಪರಂತು, ಅದನ್ನು ಮಾಡುವುದಕ್ಕೆ ಮುಂಚೆ ಯಾವುದೇ ದಿನಾಂಕಕ್ಕೆ ಅದರ ಯಾವುದೇ ಉಪಬಂಧಗಳನ್ನು ಪೂರ್ವಾನ್ವಯವಾಗಿ ಯಾವುದೇ ಅಂಥ ಆದೇಶವು ಮಾಡುವಷ್ಟರ ಮಟ್ಟಿಗೆ, ಆ ಕಾರಣದಿಂದಾಗಿ ಯಾವನೇ ವ್ಯಕ್ತಿಯು ಅಪರಾಧದ ಬಗ್ಗೆ ತಪ್ಪಿತಸ್ಥನಾಗಿರುವುದಾಗಿ ಭಾವಿಸತಕ್ಕುದಲ್ಲ.

## ಅನುಸೂಚಿ

## (24ನೇ ಪ್ರಕರಣವನ್ನು ನೋಡಿ)

## ಕೋಷ್ಟಕ

| | ಆಸ್ತಿಯ ವಿವರಣೆ | ವರ್ಷಗಳ ಸಂಖ್ಯೆ ಅಥವಾ ಅವಧಿ |
|---|---|---|
| ಎ. | ಪೂರ್ಣ ಸ್ವಾಮ್ಯದ ಮೇರೆಗೆ ಒಡೆತನದಲ್ಲಿರುವ ಭೂಮಿ. | ನಿರ್ದಿಷ್ಟವಲ್ಲದ್ದು. |
| ಬಿ. | ಗೇಣಿಯ ಮೇರೆಗೆ ಧಾರಣ ಮಾಡಿರುವ ಭೂಮಿ,- | |
| (ಎ) | ಭೂಮಿಯಲ್ಲಿನ ಹೂಡಿಕೆಗಾಗಿ | ಗೇಣಿಯ ಅವಧಿ ಅಥವಾ ಗೇಣಿಯನ್ನು ಹಸ್ತಾಂತರಣ ಮಾಡಿದ ಮೇಲೆ ಮುಕ್ತಾಯವಾಗದೆ ಉಳಿದಿರುವ ಅವಧಿ. |
| (ಬಿ) | ನಿವೇಶನವನ್ನು ಸ್ವಚ್ಛಗೊಳಿಸುವ ಖರ್ಚಿಗಾಗಿ | ನಿವೇಶನವನ್ನು ಸ್ವಚ್ಛಗೊಳಿಸಿದ ದಿನಾಂಕದಂದು ಮುಕ್ತಾಯವಾಗದೆ ಉಳಿದಿರುವ ಗೇಣಿಯ ಅವಧಿ. |
| ಸಿ. | ಹೊಸದಾಗಿ ಖರೀದಿಸಿದ ಆಸ್ತಿಗಳು,- | |
| (ಎ) | ಮೇಲೆ ನಮೂದಿಸಿಲ್ಲದ ಕಟ್ಟಡಗಳು ಮತ್ತು ಖಾಯಂ ಸ್ವರೂಪದ ಸಿವಿಲ್ ಇಂಜಿನಿಯರಿಂಗ್ ಕಾಮಗಾರಿಗಳು,- | |
| (i) | ಕಛೇರಿಗಳು | ಐವತ್ತು |
| (ii) | ಮರದ ರಚನೆಗಳಂಥ ತಾತ್ಕಾಲಿಕ ನಿರ್ಮಿತಿಗಳು. | ಐದು |
| (iii) | ಕಚ್ಚಾ ರಸ್ತೆಗಳನ್ನು ಹೊರತುಪಡಿಸಿ ಇತರ ರಸ್ತೆಗಳು. | ಒಂದು ನೂರು |
| (iv) | ಇತರೆ. | ಐವತ್ತು |
| (ಬಿ) | ಸ್ವಯಂಚಾಲಿತ ವಾಹನಗಳು. | ಏಳು |
| (ಸಿ) | (i) ಕಛೇರಿ ಪೀಠೋಪಕರಣಗಳು ಮತ್ತು ಜೋಡಣೆಗಳು. | ಇಪ್ಪತ್ತು |
| | (ii) ಕಛೇರಿ ಸಾಧನ ಸಾಮಗ್ರಿ. | ಹತ್ತು |
| (ಡಿ) | ಇನ್ನೊಬ್ಬನು ಉಪಯೋಗಿಸಿದುದನ್ನು ಖರೀದಿ ಮಾಡಿದ ಆಸ್ತಿಗಳು ಮತ್ತು ಈ ಕೋಷ್ಟಕದಲ್ಲಿ ಅನ್ಯಥಾ ಒದಗಿಸಿಲ್ಲದ ಆಸ್ತಿಗಳು. | ಒಡೆಯನು ಅದನ್ನು ಆರ್ಜಿಸಿದ ಕಾಲದಲ್ಲಿ ಆ ಆಸ್ತಿಯ ಸ್ವರೂಪ, ವರ್ಷಗಳು ಮತ್ತು ಪರಿಸ್ಥಿತಿಯನ್ನು ಗಮನದಲ್ಲಿಟ್ಟುಕೊಂಡು ಪ್ರತಿಯೊಂದು ಸಂದರ್ಭದಲ್ಲಿ ರಾಜ್ಯ ಸರ್ಕಾರವು ನಿರ್ಧರಿಸುವಂಥ ಯುಕ್ತ ಅವಧಿ. |

The above translation of the Bangalore Water Supply and Sewerage Act 1964 (36 of 1964) shall be authoritative text in the Kannada Language under section 5A of the Karnataka Official Language Act, 1963 (Karnataka Act 26 of 1963).

GOVERNOR OF KARNATAKA

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ
(ಜಿ.ಕೆ. ಬೋರೇಗೌಡ)
ಸರ್ಕಾರದ ಕಾರ್ಯದರ್ಶಿ,
ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ.

ಪಿ.ಆರ್.869

## ಸಹಕಾರ ಸಚಿವಾಲಯ

## ಅಧಿಸೂಚನೆ

**ಸಂಖ್ಯೆ: ಸಿಎಂಡಬ್ಲ್ಯೂ 128 ಸಿಎನ್‌ಎಸ್ 2006, ಬೆಂಗಳೂರು, ದಿನಾಂಕ: 25ನೇ ಮಾರ್ಚ್ 2006**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಕಲಂ 29ರ ಉಪ ಕಲಂ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು ಹಾವೇರಿ ಜಿಲ್ಲೆ ರಾಣಿಬೆನ್ನೂರು ತಾಲ್ಲೂಕಿನ ವಿವಿಧ 04 ವ್ಯವಸಾಯ ಸೇವಾ ಸಹಕಾರ ಸಂಘ/ಬ್ಯಾಂಕ್‌ಗಳ ಆಡಳಿತ ಮಂಡಳಿಗೆ ಸದಸ್ಯರುಗಳನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡಿದೆ.

**ಬೇಲೂರು ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ., ರಾಣೇಬೆನ್ನೂರು ತಾಲ್ಲೂಕು**

1) ಶ್ರೀ ಹನುಮಂತಗೌಡ ಚನ್ನಬಸನಗೌಡ ಪಾಟೀಲ
2) ಶ್ರೀ ತಮ್ಮಣ್ಣ ಕರಿಯಪ್ಪ ಕಾಳಿ
3) ಶ್ರೀಮತಿ ಕೋಟ್ರಮ್ಮ ಕೋಂ ನಿಂಗಪ್ಪ ಪುಗಟಿ

**ಕೋಟಿಹಾಳ ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ., ರಾಣೇಬೆನ್ನೂರು ತಾಲ್ಲೂಕು**

1) ಶ್ರೀ ಕೊಟ್ರೇಶಪ್ಪ ದೇವಿರಪ್ಪ ಎಮ್ಮೇರ
2) ಶ್ರೀಮತಿ ನಾಗಮ್ಮ ಶೇಖಪ್ಪ ನಟ್ಟೂರ
3) ಶ್ರೀ ಪುಟ್ಟಪ್ಪ ನಾಗಪ್ಪ ಆನ್ವೇರಿ

**ರಾಣೇಬೆನ್ನೂರು ತಾಲ್ಲೂಕು ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ., ಸಾ: ಹಿರೇಮಾಗನೂರು**

1) ಶ್ರೀ ವೀರಭದ್ರಚಾರಿ ಪೂರ್ವಾಚಾರಿ ಕಮ್ಮಾರ
2) ಶ್ರೀಮತಿ ರತ್ನವ್ವ ಕೋಂ ಪರಮೇಶಪ್ಪ ನಾಗಪ್ಪನವರ
3) ಶ್ರೀ ಹೊನ್ನಪ್ಪ ಕನ್ನಪ್ಪ ನಿಟ್ಟೂರು

**ರಾಣೇಬೆನ್ನೂರು ತಾಲ್ಲೂಕು ಅರಮಲ್ಲಾಪುರ ಆಂಜನೇಯ ವ್ಯವಸಾಯ ಸೇವಾ ಕೇಂದ್ರ**

1) ಶ್ರೀ ಮನೋಜ ಗಿರಿಬಸಪ್ಪ ನಿಟ್ಟೂರ
2) ಶ್ರೀಮತಿ ಕುಸುಮಾಬಾಯಿ ಜುಳಾಜಪ್ಪ ಶೆಟ್ಟರ
3) ಶ್ರೀ ಮಂಜುನಾಥ ತಿಮ್ಮಪ್ಪ ಒಡ್ಡರ

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ಹುಚ್ಚಾಚಾರಿ**

ಪಿ.ಆರ್. 1016 ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

## ಅಧಿಸೂಚನೆ

**ಸಂಖ್ಯೆ: ಅಪಜೀ 151 ಇಎನ್‌ವಿ 2005, ಬೆಂಗಳೂರು, ದಿನಾಂಕ: 3ನೇ ಮೇ 2006**

ಜೈವಿಕವೈವಿಧ್ಯ ಅಧಿನಿಯಮ 2002 (2003ರ 18 ಕೇಂದ್ರೀಯ ಶಾಸನ)ದ 63 ನೇ ಪ್ರಕರಣದಲ್ಲಿ ಪ್ರದತ್ತವಾದ ಅಧಿಕಾರದಡಿ ಕರ್ನಾಟಕ ಸರಕಾರವು ಈ ಕೆಳಗಿನ ನಿಯಮಗಳನ್ನು ರಚಿಸಿದೆ. ಅವುಗಳೆಂದರೆ

1. **ಚಿಕ್ಕ ಹೆಸರು ಮತ್ತು ಪ್ರಾರಂಭ:**

(1) ಈ ನಿಯಮಗಳಲ್ಲಿ ಕರ್ನಾಟಕ ಜೈವಿಕವೈವಿಧ್ಯ ನಿಯಮಗಳು, 2005 ಎಂದು ಕರೆಯತಕ್ಕದ್ದು.

(2) ಈ ನಿಯಮಗಳು ಅಧಿಕೃತ ರಾಜಪತ್ರದಲ್ಲಿ ಪ್ರಕಟಗೊಂಡ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

2. **ಅರ್ಥ ವಿವರಣೆಗಳು:**

(1) ಈ ನಿಯಮಗಳಲ್ಲಿ ಸಂದರ್ಭಕ್ಕೆ ಬೇರೆ ಅರ್ಥದ ಅಗತ್ಯ ಇರದಿದ್ದರೆ,-

(ಎ) **"ಅಧಿನಿಯಮ"** ಎಂದರೆ ಜೈವಿಕವೈವಿಧ್ಯ ಅಧಿನಿಯಮ,2002 (2003 ರ 18)

(ಬಿ) **"ಪ್ರಾಧಿಕಾರ"** ಎಂದರೆ ಅಧಿನಿಯಮದ 8ನೇ ಪ್ರಕರಣದ (1)ನೇ ಉಪ ಪ್ರಕರಣದ ಮೇರೆಗೆ ಸ್ಥಾಪಿತವಾದ ರಾಷ್ಟ್ರೀಯ ಜೀವಿವೈವಿಧ್ಯ ಪ್ರಾಧಿಕಾರ

(ಸಿ) **"ಮಂಡಳಿ"** ಎಂದರೆ ಅಧಿನಿಯಮದ ಪ್ರಕರಣ 22ರಡಿ ಸ್ಥಾಪಿತವಾದ ಕರ್ನಾಟಕ ಜೀವವೈವಿಧ್ಯ ಮಂಡಳಿ

(ಡಿ) **"ಜೈವಿಕವೈವಿಧ್ಯ ನಿರ್ವಹಣಾ ಸಮಿತಿ"** ಎಂದರೆ 41ನೇ ಪ್ರಕರಣದ (1)ನೇ ಉಪ ಪ್ರಕರಣದ ಮೇರೆಗೆ ಸ್ಥಳೀಯ ಸಂಸ್ಥೆಯು ಸ್ಥಾಪಿಸಿದ ಜೈವಿಕವೈವಿಧ್ಯನಿರ್ವಹಣಾ ಸಮಿತಿ

(ಇ) **"ಶುಲ್ಕ"** ಎಂದರೆ ಅನುಸೂಚಿಯಲ್ಲಿ ಗೊತ್ತುಪಡಿಸಿರುವ ಯಾವುದೇ ಶುಲ್ಕ

(ಎಫ್) **"ನಮೂನೆ"** ಎಂದರೆ ಈ ನಿಯಮಗಳಿಗೆ ಅನುಬಂಧಿಸಿರುವ ನಮೂನೆ

(ಜಿ) **"ಸರಕಾರ"** ಎಂದರೆ ಕರ್ನಾಟಕ ರಾಜ್ಯ ಸರ್ಕಾರ

(ಹೆಚ್) **"ಸದಸ್ಯ ಕಾರ್ಯದರ್ಶಿ"** ಎಂದರೆ ಮಂಡಳಿಯ ಸದಸ್ಯ ಕಾರ್ಯದರ್ಶಿ

(ಐ) **"ಪ್ರಕರಣ"** ಎಂದರೆ ಜೈವಿಕವೈವಿಧ್ಯ ಅಧಿನಿಯಮ, 2002 ರ ಪ್ರಕರಣ

(2) ಈ ನಿಯಮಗಳಲ್ಲಿ ಉಪಯೋಗಿಸಿರುವ ಆದರೆ ಅರ್ಥವಿವರಿಸಿರದ ಮತ್ತು ಅಧಿನಿಯಮದಲ್ಲಿ ಅರ್ಥವಿವರಿಸಿರುವ ಪದಗಳ ಮತ್ತು ಪದಾವಳಿಗಳು ಅಧಿನಿಯಮದಲ್ಲಿ ಅವುಗಳಿಗೆ ಅನುಕ್ರಮವಾಗಿ ನೀಡಿರುವ ಅರ್ಥವನ್ನೇ ಹೊಂದಿರತಕ್ಕದ್ದು.

**3. ಅಧ್ಯಕ್ಷರ ಆಯ್ಕೆ ಮತ್ತು ನೇಮಕಾತಿ ವಿಧಾನ:**

1. ಮಂಡಳಿಯ ಅಧ್ಯಕ್ಷನನ್ನು ಸರ್ಕಾರ ನೇಮಕ ಮಾಡತಕ್ಕದ್ದು.

2. ಉಪನಿಯಮ (1) ರ ಪ್ರಕಾರ ಪ್ರತಿಯೊಬ್ಬ ಅಧ್ಯಕ್ಷರ ನೇಮಕಾತಿಯನ್ನು ಸರಕಾರದ ಮುಖ್ಯ ಕಾರ್ಯದರ್ಶಿ ಹಾಗು ಇಬ್ಬರು ಸರ್ಕಾರದಿಂದ ನಾಮನಿರ್ದೇಶಿಸಲ್ಪಟ್ಟ ಅನ್ವೇಷಣಾ ಸಮಿತಿಯ ಶಿಫಾರಸ್ಸಿನ ಮೇರೆಗೆ ನೇಮಿಸತಕ್ಕದ್ದು.

ಪರಂತು, ಈ ನಿಯಮದ ವ್ಯಾಪ್ತಿಗೆ ಅನ್ವಯವಾಗದಂತೆ ಅನ್ವೇಷಣಾ ಸಮಿತಿಯು ಜೀವವೈವಿಧ್ಯದ ಬಗ್ಗೆ ವಿಶೇಷ ಜ್ಞಾನವುಳ್ಳ ಆದರೆ ಸರ್ಕಾರದ ಪ್ರಧಾನ ಕಾರ್ಯದರ್ಶಿ ದರ್ಜೆಗಿಂತ ಕಡಿಮೆಯಾಗಿರದ ವ್ಯಕ್ತಿಯನ್ನು ಮಾತ್ರ ಶಿಫಾರಸ್ಸು ಮಾಡತಕ್ಕದ್ದು.

**4. ಅಧ್ಯಕ್ಷರ ಪದಾವಧಿ:**

(1) ಮಂಡಳಿಯ ಅಧ್ಯಕ್ಷರ ಪದಾವಧಿಯು 3 ವರ್ಷಗಳ ಅವಧಿಗೆ ಪದವನ್ನೊಂದಿರತಕ್ಕದ್ದು. ಮತ್ತು ಪುನ: ನೇಮಕಕ್ಕೆ ಅರ್ಹನಾಗಿರತಕ್ಕದ್ದು.

ಪರಂತು ಯಾರೇ ಅಧ್ಯಕ್ಷ 65 ವರ್ಷಗಳ ವಯಸ್ಸನ್ನು ತಲುಪಿದ ನಂತರ ಈ ಪದವನ್ನು ಹೊಂದಿರತಕ್ಕದ್ದಲ್ಲ.

(2) ಅಧ್ಯಕ್ಷನು ಸರ್ಕಾರಕ್ಕೆ ಕನಿಷ್ಟ ಒಂದು ತಿಂಗಳ ಸೂಚನೆಯನ್ನು ನೀಡುವ ಮೂಲಕ ತನ್ನ ಪದಕ್ಕೆ ರಾಜೀನಾಮೆ ನೀಡಬಹುದು.

(3) ಉಪ ನಿಯಮ (1) & (2) ರ ವ್ಯಾಪ್ತಿಗೆ ಅನ್ವಯವಾಗದಂತೆ ಅಧ್ಯಕ್ಷನ ಪದಾವಧಿಯ ಮುಂದುವರಿಕೆಯು ರಾಜ್ಯ ಸರ್ಕಾರದ ಮರ್ಜಿಗೆ ಬಿಟ್ಟ ವಿಷಯವಾಗಿರುತ್ತದೆ.

**5. ಅಧ್ಯಕ್ಷರ ವೇತನ ಮತ್ತು ಭತ್ಯೆಗಳು:**

1. ಓರ್ವ ನಿವೃತ್ತ ವ್ಯಕ್ತಿಯನ್ನು ಅಧ್ಯಕ್ಷನನ್ನಾಗಿ ನೇಮಿಸಿದಲ್ಲಿ ಅವನು ಸರ್ಕಾರವು ಕಾಲಕಾಲಕ್ಕೆ ತೀರ್ಮಾನಿಸುವಂತಹ ವೇತನ,ಭತ್ಯೆಗಳು, ರಜೆ, ನಿವೃತ್ತಿ ವೇತನ, ಭವಿಷ್ಯನಿಧಿ, ಮನೆ ಬಾಡಿಗೆ ಮತ್ತಿತರ ಸವಲತ್ತುಗಳಿಗೆ ಅರ್ಹನಾಗಿರುತ್ತಾನೆ.

**6. ಅಧಿಕಾರೇತರ ಸದಸ್ಯರ ಪದಾವಧಿ ಮತ್ತು ಭತ್ಯೆಗಳು:**

1) ಮಂಡಳಿಯ ಪ್ರತಿಯೊಬ್ಬ ಅಧಿಕಾರೇತರ ಸದಸ್ಯನು ಅವನ ನೇಮಕಾತಿಯನ್ನು ಅಧಿಕೃತ ರಾಜಪತ್ರದಲ್ಲಿ ಪ್ರಕಟಿಸಿದ ದಿನಾಂಕದಿಂದ ಒಂದು ಬಾರಿಗೆ ಮೂರು ವರ್ಷಗಳಿಗೆ ಮೀರದ ಅವಧಿಗೆ ತನ್ನ ಪದವನ್ನು ಹೊಂದಿರತಕ್ಕದ್ದು.

2) ಮಂಡಳಿಯ ಸಭೆಗೆ ಹಾಜರಾಗುವ ಪ್ರತಿಯೊಬ್ಬ ಅಧಿಕಾರೇತರ ಸದಸ್ಯನು, ಸಮಿತಿಗಳು, ಆಯೋಗಗಳು ಅಥವಾ ಇತರ ಸಂಸ್ಥೆಗಳ ಅಧಿಕಾರೇತರ ಸದಸ್ಯರು ಗಳಿಗೆ ನೀಡುವ ಪ್ರವಾಸ ಭತ್ಯೆ ನಿಯಮಗಳು 2001 ಹಾಗೂ ಕಾಲಕಾಲಕ್ಕೆ ಪರಿಷ್ಕರಣೆಗೊಳ್ಳುವಷ್ಟು ಉಪವೇಶನ ಭತ್ಯೆ, ಪ್ರಯಾಣ ಭತ್ಯೆ,ದಿನಭತ್ಯೆ ಮತ್ತು ಇಂತಹ ಇತರ ಭತ್ಯೆಗಳನ್ನು ಪಡೆಯಲು ಹಕ್ಕುಳ್ಳವನಾಗಿರತಕ್ಕದ್ದು.

**7. ಅಧಿಕಾರೇತರ ಸದಸ್ಯರ ಖಾಲಿ ಸ್ಥಾನಗಳನ್ನು ಭರ್ತಿ ಮಾಡುವುದು:**

1. ಮಂಡಳಿಯ ಅಧಿಕಾರೇತರ ಸದಸ್ಯನು ತನ್ನ ಸಹಿ ಹಾಕಿದ ಲಿಖಿತ ರಾಜೀನಾಮೆ ಪತ್ರವನ್ನು ಸರ್ಕಾರಕ್ಕೆ ಸಲ್ಲಿಸುವ ಮೂಲಕ ತನ್ನ ಪದಕ್ಕೆ ರಾಜೀನಾಮೆ ನೀಡಬಹುದು ಮತ್ತು ಆ ನಂತರ ಮಂಡಳಿಯಲ್ಲಿ ಆ ಸದಸ್ಯನ ಸ್ಥಾನ ತೆರವಾಗತಕ್ಕದ್ದು.

2. ಮಂಡಳಿಯಲ್ಲಿ ಅಧಿಕಾರೇತರ ಸದಸ್ಯನ ಸಾಂದರ್ಭಿಕ ಖಾಲಿ ಸ್ಥಾನದಲ್ಲಿ ಹೊಸಬರನ್ನು ನಾಮ ನಿರ್ದೇಶಿಸುವ ಮೂಲಕ ಭರ್ತಿ ಮಾಡತಕ್ಕದ್ದು ಮತ್ತು ಖಾಲಿ ಸ್ಥಾನವನ್ನು ಭರ್ತಿ ಮಾಡಲು ನಾಮ ನಿರ್ದೇಶಿಸಲಾದ ವ್ಯಕ್ತಿಯು ಅವನನ್ನು ಯಾರ ಸ್ಥಾನದಲ್ಲಿ ನಾಮ ನಿರ್ದೇಶನ ಮಾಡಲಾಗಿದೆಯೋ ಆ ಸದಸ್ಯನ ಉಳಿದ ಪದಾವಧಿಗೆ ಮಾತ್ರ ಆ ಸ್ಥಾನವನ್ನು ಹೊಂದಿರತಕ್ಕದ್ದು.

**8. ಮಂಡಳಿಯ ಸದಸ್ಯರನ್ನು ತೆಗೆದುಹಾಕುವುದು:**

ಅಧಿನಿಯಮದ ಪ್ರಕರಣ 11 ಮತ್ತು 25 ರಡಿ ನಿರ್ದಿಷ್ಟಪಡಿಸಿರುವ ಯಾವುದೇ ಕಾರಣದ ಮೇಲೆ ಮಂಡಳಿಯ ಯಾರೇ ಸದಸ್ಯನನ್ನು ಸರ್ಕಾರವು ನೇಮಕ ಮಾಡಿದ ಪ್ರಧಾನ ಕಾರ್ಯದರ್ಶಿ ದರ್ಜೆಗೆ ಕಡಿಮೆ ಇರದ ಅಧಿಕಾರಿಯಿಂದ ಯುಕ್ತ ಮತ್ತು ಸರಿಯಾದ ತನಿಖೆ ನಡಸದೆ ಮತ್ತು ಅಂತಹ ಸದಸ್ಯನಿಗೆ ಆತನ ಅಹವಾಲನ್ನು ಹೇಳಿಕೊಳ್ಳಲು ಸೂಕ್ತ ಅವಕಾಶವನ್ನು ನೀಡದೆ ಪದದಿಂದ ತೆಗೆದು ಹಾಕತಕ್ಕದ್ದಲ್ಲ.

**9. ಪದನಿಮಿತ್ತ ಸದಸ್ಯರ ನೇಮಕಾತಿ:**

ಸರ್ಕಾರವು ಸಂಬಂಧಪಟ್ಟ ಇಲಾಖೆಗಳನ್ನು ಪ್ರತಿನಿಧಿಸುವುದಕ್ಕೆ 5 ಜನರಿಗಿಂತ ಹೆಚ್ಚಿಲ್ಲದ ಪದನಿಮಿತ್ತ ಸದಸ್ಯರನ್ನು ನೇಮಕಮಾಡತಕ್ಕದ್ದು.

**10. ಮಂಡಳಿಯ ಸದಸ್ಯ ಕಾರ್ಯದರ್ಶಿ:**

1. ಮಂಡಳಿಯ ಸದಸ್ಯ ಕಾರ್ಯದರ್ಶಿಯವರನ್ನು ಸರಕಾರವು ಪ್ರತಿನಿಯೋಜನೆ ಮೇರೆಗೆ ನೇಮಿಸತಕ್ಕದ್ದು. ಆತನು ಭಾರತೀಯ ಅರಣ್ಯ ಸೇವೆ ಅಥವಾ ಆಡಳಿತ ಸೇವೆಯ ಗರಿಷ್ಠ ಕಾಲಮಿತಿ ಶ್ರೇಣಿಯಲ್ಲಿರಬೇಕು ಮತ್ತು ಜೈವಿಕವೈವಿಧ್ಯ ಸಂಪನ್ಮೂಲಗಳ ಸಂರಕ್ಷಣೆ ಮತ್ತು ನಿರ್ವಹಣೆಯಲ್ಲಿ ಸಾಕಷ್ಟು ಜ್ಞಾನಹೊಂದಿರತಕ್ಕದ್ದು.
2. ನಿಯೋಜನೆಯ ನಿಬಂಧನೆಗಳನ್ನು ಸರಕಾರವೇ ತೀರ್ಮಾನಿಸತಕ್ಕದ್ದು.
3. ಸದಸ್ಯ ಕಾರ್ಯದರ್ಶಿಯು ಮಂಡಳಿಯ ಸಭೆಗಳನ್ನು ಸಮನ್ವಯಗೊಳಿಸುವುದು ಮತ್ತು ಕರೆಯುವುದು, ಮಂಡಳಿಯ ವ್ಯವಹರಣೆಗಳ, ದಾಖಲೆಗಳ ನಿರ್ವಹಣೆ ಮತ್ತು ಮಂಡಳಿಯು ಅವರಿಗೆ ವಹಿಸುವಂಥ ಇತರ ವಿಷಯಗಳ ನಿರ್ವಹಣೆಗಳಿಗೆ ಜವಾಬ್ದಾರಿಯಾಗಿರತಕ್ಕದ್ದು.
4. ಮಂಡಳಿಯು ಹೊರಡಿಸುವ ಎಲ್ಲಾ ಅಧಿಸೂಚನೆ ಮತ್ತು ಆಜ್ಞೆಗಳು ಸದಸ್ಯ ಕಾರ್ಯದರ್ಶಿಯ ಅಥವಾ ಮಂಡಳಿಯು ಈ ಕೆಲಸಕ್ಕಾಗಿ ನಿಯೋಜಿಸುವ ಬೇರೆ ಅಧಿಕಾರಿಯ ಸಹಿಯನ್ನು ಹೊಂದಿರತಕ್ಕದ್ದು.
5. ಸದಸ್ಯ ಕಾರ್ಯದರ್ಶಿಯು ಸ್ವತ: ತಾನೇ ಆಗಲಿ ಅಥವಾ ಈ ಉದ್ದೇಶಕ್ಕಾಗಿ ಅಧಿಕಾರ ನೀಡಿರುವ ಮಂಡಳಿಯ ಒಬ್ಬ ಅಧಿಕಾರಿಯ ಮೂಲಕ, ಅನುಮೋದಿತ ಆಯವ್ಯಯದಿಂದ ಎಲ್ಲಾ ಸಂದಾಯಗಳನ್ನು ಮಂಜೂರು ಮಾಡಬಹುದು ಮತ್ತು ಬಟವಾಡೆ ಮಾಡಬಹುದು.

6. ಸದಸ್ಯ ಕಾರ್ಯದರ್ಶಿಯು ಮಂಡಳಿಯ ಎಲ್ಲಾ ಅನುಮೋದಿತ ಅಂದಾಜುಗಳಿಗೆ ಆಡಳಿತಾತ್ಮಕ ಮಂಜೂರಾತಿ ನೀಡುವ ಸಂಪೂರ್ಣ ಅಧಿಕಾರವನ್ನು ಹೊಂದಿರತಕ್ಕದ್ದು.
7. ಸದಸ್ಯ ಕಾರ್ಯದರ್ಶಿಯು ಮಂಡಳಿಯ ಎಲ್ಲಾ ರಹಸ್ಯ ಕಾಗದ ಪತ್ರಗಳ ಮತ್ತು ದಾಖಲೆಗಳ ಪ್ರಭಾರ ಹೊಂದಿರತಕ್ಕದ್ದು ಮತ್ತು ಅವುಗಳ ಸುರಕ್ಷಿತ ಅಭಿರಕ್ಷೆಗೆ ಜವಾಬ್ದಾರನಾಗಿರತಕ್ಕದ್ದು.
8. ಸದಸ್ಯ ಕಾರ್ಯದರ್ಶಿಯವರು ಮಂಡಳಿಯ ಅಧಿಕಾರಿಗಳ ಮತ್ತು ಸಿಬ್ಬಂದಿಯ ರಹಸ್ಯ ವರದಿಗಳನ್ನು ಬರೆಯುವುದು ಹಾಗೂ ಕಾಪಾಡಿಕೊಳ್ಳುವುದು ಮತ್ತು ಅವುಗಳಿಗೆ ಅಧ್ಯಕ್ಷರ ಮೇಲು ರುಜು ಪಡೆದುಕೊಳ್ಳುವುದು.
9. ಸದಸ್ಯ ಕಾರ್ಯದರ್ಶಿಯು ಕಾಲಕಾಲಕ್ಕೆ ಸರಕಾರ ಅಥವಾ ಮಂಡಳಿಯು ನಿಗದಿಪಡಿಸುವ ಇತರ ಕೆಲಸಗಳನ್ನು ಸಹ ಕೈಗೊಳ್ಳತಕ್ಕದ್ದು.

**11. ಮಂಡಳಿಯ ಸಭೆಗಳು :**

1. ಮಂಡಳಿಯು ಸಾಮಾನ್ಯವಾಗಿ ಮೂರು ತಿಂಗಳ ಅವಧಿಯ ನಂತರ ಆದರೆ, ಒಂದು ವರ್ಷದಲ್ಲಿ ಕನಿಷ್ಠ ನಾಲ್ಕು ಬಾರಿ ಮಂಡಳಿಯ ಕೇಂದ್ರ ಕಾರ್ಯಸ್ಥಾನದಲ್ಲಿ ಅಥವಾ ಅಧ್ಯಕ್ಷನು ತೀರ್ಮಾನಿಸುವಂತಹ ಇತರ ಸ್ಥಳಗಳಲ್ಲಿ ಸಭೆ ಸೇರತಕ್ಕದ್ದು.
2. ಮಂಡಳಿಯ ಕನಿಷ್ಠ 5 ಸದಸ್ಯರ ಲಿಖಿತ ಕೋರಿಕೆಯ ಮೇರೆಗೆ ಅಥವಾ ಸರಕಾರದ ನಿರ್ದೇಶನದ ಮೇರೆಗೆ ಅಧ್ಯಕ್ಷನು ಮಂಡಳಿಯ ವಿಶೇಷ ಸಭೆಯನ್ನು ಕರೆಯತಕ್ಕದ್ದು.
3. ಸಾಮಾನ್ಯ ಸಭೆ ನಡೆಸಲು ಕನಿಷ್ಠ ಹದಿನೈದು ದಿನಗಳ ಸೂಚನೆಯನ್ನು ಮತ್ತು ವಿಶೇಷ ಸಭೆ ನಡೆಸಲು ಕನಿಷ್ಠ ಮೂರು ದಿನಗಳ ಸೂಚನೆಯನ್ನು ಅಂತಹ ಸಭೆ ನಡೆಸುವ ಉದ್ದೇಶ, ಸಮಯ ಮತ್ತು ಸ್ಥಳವನ್ನು ನಿರ್ದಿಷ್ಟಪಡಿಸಿ ಸದಸ್ಯರಿಗೆ ನೀಡತಕ್ಕದ್ದು.
4. ಪ್ರತಿಯೊಂದು ಸಭೆಯು ಅಧ್ಯಕ್ಷನ ಅಧ್ಯಕ್ಷತೆಯಲ್ಲಿ ನಡೆಯತಕ್ಕದ್ದು. ಅವನ ಗೈರು ಹಾಜರಿಯಲ್ಲಿ ಸಭೆಯಲ್ಲಿ ಹಾಜರಿರುವ ಸದಸ್ಯರು ತಮ್ಮ ಪೈಕಿ ಚುನಾಯಿಸಿದ ಒಬ್ಬ ಸದಸ್ಯನು ಸಭೆಯ ಅಧ್ಯಕ್ಷತೆಯನ್ನು ವಹಿಸತಕ್ಕದ್ದು.
5. ಮಂಡಳಿಯ ಸಭೆಯಲ್ಲಿ ತೆಗೆದುಕೊಳ್ಳುವ ತೀರ್ಮಾನಗಳನ್ನು ಅಗತ್ಯವಿದ್ದರೆ, ಹಾಜರಿರುವ ಸದಸ್ಯರ ಸರಳ ಬಹುಮತದ ಮತ್ತು ಮತದಾನದ ಮೂಲಕ ತೆಗೆದುಕೊಳ್ಳತಕ್ಕದ್ದು ಮತ್ತು ಅಧ್ಯಕ್ಷನು ಅಥವಾ ಅಧ್ಯಕ್ಷನ ಗೈರು ಹಾಜರಿಯಲ್ಲಿ ಅಧ್ಯಕ್ಷತೆಯನ್ನು ವಹಿಸಿರುವ ಸದಸ್ಯನು ತನ್ನ ಎರಡನೆಯ ಅಥವಾ ನಿರ್ಣಾಯಕ ಮತವನ್ನು ಚಲಾಯಿಸುವ ಅವಕಾಶ ಇರತಕ್ಕದ್ದು.
6. ಪ್ರತಿಯೊಬ್ಬ ಸದಸ್ಯನು ಒಂದು ಮತ ಚಲಾಯಿಸುವ ಹಕ್ಕನ್ನು ಹೊಂದಿರತಕ್ಕದ್ದು.
7. ಮಂಡಳಿಯ ಪ್ರತಿಯೊಂದು ಸಭೆಯ ಕೋರಂ ಐದು ಆಗಿರತಕ್ಕದ್ದು.
8. ಸದಸ್ಯನು ಹತ್ತು ದಿನಗಳ ನೋಟೀಸನ್ನು ನೀಡದೇ ಯಾವುದೇ ವಿಷಯವನ್ನು ಸಭೆಯ ಪರಿಗಣನೆಗೆ ಅದರ ಮುಂದಿಡಲು ಹಕ್ಕುಳ್ಳವನಾಗಿರತಕ್ಕದ್ದಲ್ಲ. ಆದರೆ, ಹತ್ತು ದಿನಗಳ ನೋಟೀಸು ನೀಡದೇ ಯಾವುದೇ ವಿಷಯವನ್ನು ಸಭೆಯಲ್ಲಿ ಮಂಡಿಸಲು ಅಧ್ಯಕ್ಷ ತನ್ನ ವಿವೇಚನಾನುಸಾರ ಅನುಮತಿ ನೀಡಿದರೆ ಹಾಗೇ ಮಾಡಬಹುದು.
9. ಸಭೆಯ ಸೂಚನಾ ಪತ್ರವನ್ನು ದೂತನ ಮೂಲಕ ನೀಡತಕ್ಕದ್ದು ಅಥವಾ ನೋಂದಾಯಿತ ಅಂಚೆಯ ಮೂಲಕ ಸದಸ್ಯರ ಇತ್ತೀಚಿನ ನಿವಾಸಕ್ಕೆ ಅಥವಾ ವ್ಯವಹಾರದ ವಿಳಾಸಕ್ಕೆ ಅಥವಾ ಪ್ರಕರಣದ ಸಂದರ್ಭದಲ್ಲಿ ಮಂಡಳಿಯ ಸದಸ್ಯ ಕಾರ್ಯದರ್ಶಿಯು ಸೂಕ್ತವೆಂದು ಭಾವಿಸಬಹುದಾದ, ಇತರ ರೀತಿಯಲ್ಲಿ ಕಳುಹಿಸತಕ್ಕದ್ದು.
10. ಪೂರಕವಾಗಿ ಮಂಡಳಿಯು ತನ್ನ ವ್ಯವಹಾರವನ್ನು ಸಮರ್ಪವಾಗಿ ನಿರ್ವಹಿಸಲು ತನಗೆ ಸೂಕ್ತವೆನಿಸುವ ವಿಧಿವಿಧಾನಗಳನ್ನು ಅಳವಡಿಸಿಕೊಳ್ಳಬಹುದು.

**12. ಮಂಡಳಿಯು ತಜ್ಞರ ಸಮಿತಿಗಳ ನೇಮಕ ಮತ್ತು ಅವರ ಹಕ್ಕುಗಳು:**

1. ಮಂಡಳಿಯು, ತಾನು ಸೂಕ್ತವೆಂದು ಭಾವಿಸಬಹುದಾದಂಥ ಉದ್ದೇಶಗಳಿಗಾಗಿ ಪೂರ್ಣವಾಗಿ ಸದಸ್ಯರನ್ನು ಅಥವಾ ಪೂರ್ಣವಾಗಿ ಇತರೆ ವ್ಯಕ್ತಿಗಳನ್ನು ಅಥವಾ ಭಾಗಶ: ಸದಸ್ಯರನ್ನು ಅಥವಾ ಭಾಗಶ: ಇತರೆ ವ್ಯಕ್ತಿಗಳನ್ನು ಒಳಗೊಂಡ ಎಷ್ಟೇ ಸಂಖ್ಯೆಯ ಸಮಿತಿಗಳನ್ನು ರಚಿಸಬಹುದು.
2. ಮಂಡಳಿಯ ಸದಸ್ಯರಲ್ಲದ ಸಮಿತಿಯ ಸದಸ್ಯರಿಗೆ, ಅವರು ಸಭೆಯಲ್ಲಿ ಭಾಗವಹಿಸುವುದಕ್ಕಾಗಿ ನಿಯಮ 6 ರ ಉಪನಿಯಮ (2) ರಂತೆ ಶುಲ್ಕ ಮತ್ತು ಭತ್ಯೆಗಳನ್ನು ಪಡೆಯಲು ಹಕ್ಕುಳ್ಳವರಾಗಿರುತ್ತಾರೆ.
3. ಈ ತಜ್ಞರ ಸಮಿತಿಗಳು ಗರಿಷ್ಟ ಮೂರು ವರ್ಷಗಳ ಅವಧಿಯನ್ನೊಂದಿರುತ್ತವೆ.

**13. ಮಂಡಳಿಯ ಸಾಮಾನ್ಯ ಅಧಿಕಾರಗಳು ಮತ್ತು ಪ್ರಕಾರ್ಯಗಳು:**

ವಿಶೇಷವಾಗಿ ಮತ್ತು ಇತರ ಸಾಮಾನ್ಯ ಅವಕಾಶಗಳಿಗೆ ಪೂರ್ವಗ್ರಹ ಹೊಂದದೆ ಮಂಡಳಿಯು ಈ ಕೆಳಗಿನ ಪ್ರಕಾರ್ಯಗಳನ್ನು ನಿರ್ವಹಿಸತಕ್ಕದ್ದು.

1. ಅಧಿನಿಯಮದ ಪ್ರಕರಣ 23ರಡಿ ತಿಳಿಸಲಾಗಿರುವ ಕಾರ್ಯ ಚಟುವಟಿಕೆಗಳಿಗೆ ಸಂಬಂಧಿಸಿದ ಕಾರ್ಯವಿಧಾನ ಮತ್ತು ಮಾರ್ಗಸೂಚಿಗಳನ್ನು ರೂಪಿಸುವುದು.
2. ಜೈವಿಕವೈವಿಧ್ಯ ಸಂರಕ್ಷಣೆ, ಅದರ ಘಟಕಾಂಶಗಳ ಸುಸ್ಥಿರ ಬಳಕೆ ಮತ್ತು ಜೈವಿಕಸಂಪನ್ಮೂಲ ಹಾಗೂ ಅವುಗಳ ಜ್ಞಾನದ ಬಳಕೆಯಿಂದ ದೊರೆಯುವ ಲಾಭಗಳನ್ನು ನ್ಯಾಯೋಚಿತವಾದ ಮತ್ತು ನಿಷ್ಪಕ್ಷಪಾತವಾದ ರೀತಿಯಲ್ಲಿ ಹಂಚಿಕೊಳ್ಳುವುದಕ್ಕೆ ಸಂಬಂಧಿಸಿದ ಯಾವುದೇ ವಿಷಯದ ಬಗ್ಗೆ ಸರಕಾರಕ್ಕೆ ಸಲಹೆ ಮಾಡುವುದು.
3. ಸರ್ಕಾರದ ವಿವಿಧ ಇಲಾಖೆಗಳಿಗೆ ಹಾಗೂ ಜೀವವೈವಿಧ್ಯ ನಿರ್ವಹಣಾ ಸಮಿತಿಗಳಿಗೆ ಸೂಕ್ತ ತಾಂತ್ರಿಕ ನೆರವು ಮತ್ತು ಮಾರ್ಗದರ್ಶನ ನೀಡುವುದು.
4. ಯಾವುದೇ ಜೈವಿಕ ಸಂಪನ್ಮೂಲಗಳ ವಾಣಿಜ್ಯ ಬಳಕೆ ಅಥವಾ ಜೈವಿಕ ಸಮೀಕ್ಷೆ ಮತ್ತು ಜೈವಿಕ ಬಳಕೆಗಾಗಿ ಭಾರತೀಯರಿಗೆ ಅನುಮೋದನೆಗಳನ್ನು ಅಥವಾ ಮಾಡಿಕೊಂಡ ಇತರ ರೀತಿಯ ಕೋರಿಕೆಗಳನ್ನು ಮಂಜೂರು ಮಾಡುವ ಮೂಲಕ ವಿನಿಯಮಿಸುವುದು.

5. ರಾಜ್ಯ ಜೀವವೈವಿಧ್ಯ ನಿರ್ವಹಣೆಯ ಕಾರ್ಯತಂತ್ರ ಮತ್ತು ಕ್ರಿಯಾಯೋಜನೆಗಳನ್ನು ಸಮನ್ವಯಗೊಳಿಸುವುದು ಹಾಗೂ ಅನುಷ್ಠಾನಗೊಳಿಸುವುದು.
6. ಉದ್ದೇಶಿತ ಅಧ್ಯಯನಗಳನ್ನು ಆಯೋಜಿಸುವುದು ಮತ್ತು ಪರಿಶೋಧನೆ ಹಾಗೂ ಸಂಶೋಧನೆಗಳನ್ನು ಪ್ರಾಯೋಜಿಸುವುದು.
7. ತನ್ನ ಪ್ರಕಾರ್ಯಗಳನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸುವಲ್ಲಿ ಮಂಡಳಿಗೆ ತಾಂತ್ರಿಕ ನೆರವನ್ನು ನೀಡುವುದಕ್ಕಾಗಿ ಮೂರು ವರ್ಷಗಳನ್ನು ಮೀರದ ಒಂದು ನಿರ್ದಿಷ್ಟ ಅವಧಿಗೆ ಸಲಹೆಗಾರರನ್ನು ನೇಮಕಮಾಡಿಕೊಳ್ಳುವುದು. ಆದರೆ 3 ವರ್ಷಗಳ ಅವಧಿಯ ನಂತರವೂ ಯಾರೇ ಸಲಹೆಗಾರರನ್ನು ನೇಮಕ ಮಾಡಿಕೊಳ್ಳುವುದು ಅವಶ್ಯಕ ಮತ್ತು ಯುಕ್ತವೆನಿಸಿದರೆ, ಮಂಡಳಿಯು ಅಂತಹ ನೇಮಕಾತಿಗಾಗಿ ಸರ್ಕಾರದ ಪೂರ್ವಾನುಮತಿಯನ್ನು ಪಡೆಯತಕ್ಕದ್ದು.
8. ಜೈವಿಕವೈವಿಧ್ಯ ಸಂರಕ್ಷಣೆ, ಅದರ ಘಟಕಾಂಶಗಳ ಸುಸ್ಥಿರ ಬಳಕೆ ಮತ್ತು ಜೈವಿಕ ಸಂಪನ್ಮೂಲ ಹಾಗೂ ಜ್ಞಾನಶಕ್ತಿಯ ಬಳಕೆಯಿಂದ ದೊರೆಯುವ ಲಾಭಗಳನ್ನು ನ್ಯಾಯೋಚಿತವಾಗಿ ಮತ್ತು ನಿಷ್ಪಕ್ಷಪಾತವಾದ ರೀತಿಯಲ್ಲಿ ಹಂಚಿಕೊಳ್ಳುವುದಕ್ಕೆ ಸಂಬಂಧಿಸಿದ ತಾಂತ್ರಿಕ ಹಾಗು ಅಂಕಿಅಂಶ ದತ್ತಾಂಶವನ್ನು, ಕೈಪಿಡಿಗಳನ್ನು, ಸಂಹಿತೆಗಳನ್ನು ಅಥವಾ ಮಾರ್ಗದರ್ಶಿಕೆಗಳನ್ನು ಸಂಗ್ರಹಿಸುವುದು, ಸಂಕಲ್ಪಿಸುವುದು ಮತ್ತು ಪ್ರಕಟಿಸುವುದು.
9. ಜೈವಿಕವೈವಿಧ್ಯ ಸಂರಕ್ಷಣೆ, ಅದರ ಘಟಕಾಂಶಗಳ ಸುಸ್ಥಿರ ಬಳಕೆ ಮತ್ತು ಜೈವಿಕ ಸಂಪನ್ಮೂಲ ಹಾಗೂ ಜ್ಞಾನಶಕ್ತಿಯ ಬಳಕೆಯಿಂದ ದೊರೆಯುವ ಲಾಭಗಳನ್ನು ನ್ಯಾಯೋಚಿತವಾಗಿ ಮತ್ತು ನಿಷ್ಪಕ್ಷಪಾತವಾದ ರೀತಿಯಲ್ಲಿ ಹಂಚಿಕೊಳ್ಳುವುದಕ್ಕೆ ಸಂಬಂಧಿಸಿದ ವಿಷಯಗಳ ಬಗ್ಗೆ ವ್ಯಾಪಕ ಕಾರ್ಯಕ್ರಮಗಳನ್ನು ಸಮೂಹ ಮಾಧ್ಯಮಗಳ ಮೂಲಕ ಸಂಘಟಿಸುವುದು.
10. ಜೈವಿಕವೈವಿಧ್ಯ ಸಂರಕ್ಷಣೆಗಾಗಿ ಮತ್ತು ಅದರ ಘಟಕಗಳ ಸುಸ್ಥಿರ ಬಳಕೆಗಾಗಿಯ ಕಾರ್ಯಕ್ರಮಗಳಲ್ಲಿ ತೊಡಗಿರುವ ಅಥವಾ ತೊಡಗಿಸಿಕೊಳ್ಳುವ ಸಂಭವವಿರುವ ಸಿಬ್ಬಂದಿಗೆ ಸೂಕ್ತ ತರಬೇತಿಯನ್ನು ಯೋಜಿಸುವುದು ಮತ್ತು ಸಂಘಟಿಸುವುದು.
11. ಜೈವಿಕ ಸಂಪನ್ಮೂಲಗಳ ಮತ್ತು ಅವುಗಳ ಬಗೆಗಿನ ಸಾಂಪ್ರದಾಯಿಕ ಜ್ಞಾನದ ಪರಿಣಾಮಕಾರಿ ನಿರ್ವಹಣೆ, ಪ್ರವರ್ಧನೆ ಮತ್ತು ಸ್ಥಿರ ಬಳಕೆಯಾಗುವಂತೆ ಮಾಡಲು ಜೈವಿಕವೈವಿಧ್ಯ ರಿಜಿಸ್ಟರ್‌ಗಳು ಮತ್ತು ವಿದ್ಯುನ್ಮಾನ ದತ್ತಾಂಶ ಆಧಾರಗಳ ಮೂಲಕ ಜೈವಿಕ ಸಂಪನ್ಮೂಲಗಳಿಗೆ ಮತ್ತು ಅವುಗಳ ಬಗೆಗಿನ ಸಾಂಪ್ರದಾಯಿಕ ಜ್ಞಾನಕ್ಕೆ ದತ್ತಾಂಶದ ಆಧಾರವನ್ನು ನಿರ್ಮಿಸಲು ಮತ್ತು ಮಾಹಿತಿ ಮತ್ತು ದಸ್ತಾವೇಜೀಕರಣ ವ್ಯವಸ್ಥೆಯನ್ನು ಸೃಜಿಸಲು ಕ್ರಮತೆಗೆದುಕೊಳ್ಳುವುದು.
12. ಅಧಿನಿಯಮವನ್ನು ಪರಿಣಾಮಕಾರಿಯಾಗಿ ಕಾರ್ಯರೂಪಕ್ಕೆ ತರಲು ಮತ್ತು ಜೈವಿಕವೈವಿಧ್ಯ ಸಂರಕ್ಷಣೆ, ಅದರ ಘಟಕಗಳ ಸುಸ್ಥಿರ ಬಳಕೆ ಹಾಗೂ ಅವುಗಳ ಲಾಭಗಳ ನ್ಯಾಯಸಮ್ಮತ ಹಂಚಿಕೆ ಕುರಿತು ಸ್ಥಳೀಯ ಸಂಸ್ಥೆಗಳಿಗೆ ಹಾಗೂ ಜೈವಿಕವೈವಿಧ್ಯ ನಿರ್ವಹಣಾ ಸಮಿತಿಗಳಿಗೆ ಲಿಖಿತದಲ್ಲಿ ನಿರ್ದೇಶನಗಳನ್ನು ನೀಡುವುದು.
13. ಮಂಡಳಿಯ ಕಾರ್ಯನಿರ್ವಹಣೆಯ ಬಗ್ಗೆ ಮತ್ತು ಅಧಿನಿಯಮದ ಅನುಷ್ಠಾನದ ಬಗ್ಗೆ ವರದಿಯನ್ನು ಸಲ್ಲಿಸುವುದು.
14. ಕಾಲಕಾಲಕ್ಕೆ ಲಾಭ ಹಂಚಿಕೆ ಶುಲ್ಕದ ಬಗ್ಗೆ ಅಥವಾ ಜೈವಿಕ ಸಂಪನ್ಮೂಲದ ಸಂಬಂಧದಲ್ಲಿ ಸ್ವಾಮ್ಯ ಶುಲ್ಕದ ಬದಲಾವಣೆಗಳ ಬಗ್ಗೆ ಸರ್ಕಾರಕ್ಕೆ ಶಿಫಾರಸ್ಸು ಮಾಡುವುದು, ಅವುಗಳನ್ನು ಮಾರ್ಪಾಟುಗೊಳಿಸುವುದು ಮತ್ತು ಸಂಗ್ರಹಿಸುವುದು.
15. ಜೈವಿಕ ಸಂಪನ್ಮೂಲಗಳ ಹಾಗು ಅವುಗಳಿಗೆ ಸಂಬಂಧಿಸಿದ ಜ್ಞಾನ ಪರಂಪರೆಗಳ ಕುರಿತಾದ ಬೌದ್ಧಿಕ ಹಕ್ಕು ಸ್ವಾಮ್ಯ ಹಾಗೂ ಇತರ ಹಕ್ಕುಗಳನ್ನು ರಕ್ಷಿಸಲು ಸೂಕ್ತ ಕ್ರಮಗಳನ್ನು ರೂಪಿಸುವುದು ಮತ್ತು ಜನತಾ ಜೀವವೈವಿಧ್ಯ ರಿಜಿಸ್ಟರ್‌ಗಳಲ್ಲಿ ನಮೂದಿತವಾದ ಮಾಹಿತಿಗಳ ಗೌಪ್ಯತೆ ಕಾಪಾಡುವುದು.
16. ಜೀವವೈವಿಧ್ಯ ನಿರ್ವಹಣಾ ಸಮಿತಿಗಳಿಗೆ ವಿಶಿಷ್ಟ ಉದ್ದೇಶಗಳಿಗಾಗಿ ಸಹಾಯಧನ ಅಥವಾ ದತ್ತಿಗಳನ್ನು ಮಂಜೂರು ಮಾಡುವುದು.
17. ಅಧಿನಿಯಮವನ್ನು ಅನುಷ್ಠಾನಗೊಳಿಸುವ ಸಂಬಂಧದಲ್ಲಿ ಯಾವುದೇ ಪ್ರದೇಶದ ವಾಸ್ತವಿಕ ತಪಾಸಣೆ ಕೈಗೊಳ್ಳುವುದು.
18. ಜೀವವೈವಿಧ್ಯ ಮತ್ತು ಜೀವವೈವಿಧ್ಯ ಆಧಾರಿತ ಜೀವನ ನಿರ್ವಹಣೆಯ ಉಪಾಯಗಳನ್ನು ಎಲ್ಲಾ ಸ್ಥರಗಳಲ್ಲಿ ಆಯೋಜಿಸುವುದು ಮತ್ತು ನಿರ್ವಹಣೆಯ ನಿಟ್ಟಿನಲ್ಲಿ ಸಮನ್ವಯಗೊಳಿಸುವುದು. ಸ್ಥಳೀಯ ಹಾಗೂ ರಾಜ್ಯ ಮಟ್ಟದ ಎಲ್ಲಾ ಸ್ಥರಗಳಲ್ಲಿ ಯೋಜನೆಗಳನ್ನು ಸಿದ್ಧಪಡಿಸುವುದರ ಮೂಲಕ ಅಂತಹ ಕ್ಷೇತ್ರಗಳಲ್ಲಿ ಹಾಗು ಆಡಳಿತಾತ್ಮಕ ಮಟ್ಟಗಳಲ್ಲಿ ಅವುಗಳ ಸಂರಕ್ಷಣೆ ಹಾಗು ಸುಸ್ಥಿರ ಬಳಕೆ ಹೊಂದುತ್ತವೆ ಎಂಬುದನ್ನು ಖಚಿತಪಡಿಸಿಕೊಳ್ಳುವುದು.
19. ಮಂಡಳಿಯು ರಾಜ್ಯ ಹಾಗು ಕೇಂದ್ರ ಸರ್ಕಾರಗಳ ಹಾಗೂ ಸ್ವಂತ ಎಲ್ಲಾ ಸ್ವೀಕೃತಿಗಳನ್ನು ಸೇರಿಸಿಕೊಂಡು ವಾರ್ಷಿಕ ಆಯವ್ಯಯ ಸಿದ್ಧಪಡಿಸಿಕೊಳ್ಳುವಲ್ಲಿ ಸರ್ಕಾರವು ಗೊತ್ತುಪಡಿಸಿದಂತೆ ಹಾಗೂ ಅದು ಮಾನ್ಯ ಮಾಡಿದ ಬಾಬತ್ತುಗಳಿಗಾಗಿಯೇ ಆಯವ್ಯಯ ಪಾವತಿಗಳನ್ನು ಸಿದ್ಧಗೊಳಿಸುವುದು.
20. ಎಲ್ಲಾ ಅಂದಾಜುಗಳಿಗೆ ಮಂಡಳಿಯು ಆಡಳಿತಾತ್ಮಕ ಹಾಗೂ ತಾಂತ್ರಿಕ ಮಂಜೂರಾತಿಗಳನ್ನು ನೀಡುವ ಸಂಪೂರ್ಣ ಅಧಿಕಾರ ಹೊಂದಿದ್ದು ಅಂತಹ ಆಡಳಿತಾತ್ಮಕ ಮತ್ತು ತಾಂತ್ರಿಕ ಮಂಜೂರಾತಿಯನ್ನು ನೀಡುವ ಅಧಿಕಾರವನ್ನು ಅವಶ್ಯವೆನಿಸುವ ಸಂದರ್ಭಗಳಲ್ಲಿ ಮಂಡಳಿಯ ಸದಸ್ಯ ಕಾರ್ಯದರ್ಶಿಗೆ ಪ್ರತ್ಯಾಯೋಜಿಸಬಹುದಾಗಿದೆ.
21. ಮಂಡಳಿಯ ಪ್ರಕಾರ್ಯಗಳನ್ನು ಪರಿಣಾಮಕಾರಿಯಾಗಿ ಕೈಗೊಳ್ಳಲು ಸರ್ಕಾರಕ್ಕೆ ಕೆಲವು ಹುದ್ದೆಗಳನ್ನು ಸೃಜಿಸಲು ಶಿಫಾರಸ್ಸು ಮಾಡಬಹುದಾಗಿದ್ದು ಅಂತಹ ತಾತ್ಕಾಲಿಕ, ಶಾಶ್ವತ ಅಥವಾ ಯಾವುದೇ ರೀತಿಯ ಹುದ್ದೆಗಳು ಸರ್ಕಾರದ ಪೂರ್ವಾನುಮತಿ ಇಲ್ಲದೆ ಸೃಜಿಸಲಾಗುವುದಿಲ್ಲ.
22. ಕಾಲಕಾಲಕ್ಕೆ ಸರ್ಕಾರವು ನಿರ್ದೇಶಿಸುವ ಅಥವಾ ಅಧಿನಿಯಮವು ಸೂಚಿಸುವ ಇತರ ಅಗತ್ಯ ವೆನಿಸುವ ಪ್ರಕಾರ್ಯಗಳನ್ನು ಕೈಗೊಳ್ಳುವುದು.
23. ಮಂಡಳಿಯು ಸ್ಥಿರ ಮತ್ತು ಚರ ಆಸ್ತಿಗಳನ್ನು ಹೊಂದುವ, ವಶದಲ್ಲಿಟ್ಟುಕೊಳ್ಳುವ ಹಾಗು ವಿಲೇವಾರಿ ಮಾಡುವ ಸಂಪೂರ್ಣ ಅಧಿಕಾರವನ್ನೊಂದಿರುತ್ತದೆ.

14. **ಅಧ್ಯಕ್ಷರ ಅಧಿಕಾರ ಮತ್ತು ಕರ್ತವ್ಯಗಳು:**

1. ಅಧಿನಿಯಮ ಮತ್ತು ಅದರಡಿಯಲ್ಲಿ ರಚಿತವಾದ ನಿಯಮಗಳನುಸಾರ ಮಂಡಳಿಯ ದೈನಂದಿನ ಕಾರ್ಯಚಟುವಟಿಕೆಗಳನ್ನು ಸಮರ್ಥವಾಗಿ ನಿಯಂತ್ರಿಸುವ ಕಾರ್ಯ ಅಧ್ಯಕ್ಷನದಾಗಿರತಕ್ಕದ್ದು.
2. ಮಂಡಳಿಯ ವ್ಯವಹಾರಗಳನ್ನು ನಡೆಸುವುದಕ್ಕಾಗಿ ಮತ್ತು ನಿರ್ವಹಿಸುವುದಕ್ಕಾಗಿ ಅಗತ್ಯ ವಿರುವ ನಿರ್ದೇಶನಗಳನ್ನು ನೀಡುವುದು.
3. ಅಧ್ಯಕ್ಷನು ಮಂಡಳಿಯ ಎಲ್ಲಾ ಸಭೆಗಳನ್ನು ಕರೆಯತಕ್ಕದ್ದು ಹಾಗೂ ಸಭೆಗಳ ಅಧ್ಯಕ್ಷತೆ ವಹಿಸತಕ್ಕದ್ದು ಮತ್ತು ಮಂಡಳಿಯು ತೆಗೆದುಕೊಂಡ ಎಲ್ಲಾ ನಿರ್ಣಯಗಳು ಸರಿಯಾದ ರೀತಿಯಲ್ಲಿ ಕಾರ್ಯಗತಗೊಳ್ಳುವಂತೆ ನೋಡಿಕೊಳ್ಳತಕ್ಕದ್ದು.
4. ಮಂಡಳಿಯು ಕಾಲಕಾಲಕ್ಕೆ ಪ್ರತ್ಯಾಯೋಜಿಸುವ ಅಧಿಕಾರಗಳನ್ನು ಮತ್ತು ಇತರ ಪ್ರಕಾರ್ಯಗಳನ್ನು ಅಧ್ಯಕ್ಷನು ನಿರ್ವಹಿಸತಕ್ಕದ್ದು.

15. **ಜೈವಿಕ ಸಂಪನ್ಮೂಲಗಳನ್ನು ಪಡೆಯುವುದಕ್ಕಾಗಿ ರಾಜ್ಯ ಜೈವಿಕವೈವಿಧ್ಯ ಮಂಡಳಿಗೆ ಮುಂಚಿತವಾಗಿ ತಿಳಿಸುವ ಕಾರ್ಯವಿಧಾನ:**

1. ಸಂಶೋಧನೆಗಾಗಿ ಅಥವಾ ವಾಣಿಜ್ಯ ಬಳಕೆಗಾಗಿ ಜೈವಿಕ ಸಂಪನ್ಮೂಲಗಳು ಮತ್ತು ಅವುಗಳ ಬಗೆಗಿನ ಸಾಂಪ್ರದಾಯಿಕ ಜ್ಞಾನವನ್ನು ಹೊಂದಲು ಅಧಿನಿಯಮದ ಪ್ರಕರಣ 7 ರಡಿ ಹೊರತುಪಡಿಸಿದ ಯಾರೇ ವ್ಯಕ್ತಿಯು ಮಂಡಳಿಗೆ ನಮೂನೆ-Iರಲ್ಲಿ ಪೂರ್ವಾನುಮತಿ ಅರ್ಜಿಯನ್ನು ಸಲ್ಲಿಸತಕ್ಕದ್ದು.
2. (1) ನೇ ಉಪನಿಯಮದಡಿಯಲ್ಲಿ ಸಲ್ಲಿಸಲಾದ ಪ್ರತಿಯೊಂದು ಅರ್ಜಿಯ ಜತೆಗೆ ಮಂಡಳಿಯ ಹೆಸರಿಗೆ ನೀಡಿದ ಚೆಕ್ಕು ಅಥವಾ ಡಿಮಾಂಡ್ ಡ್ರಾಫ್ಟ್ ರೂಪದಲ್ಲಿ ಒಂದು ಸಾವಿರ ರೂಪಾಯಿಗಳ ಶುಲ್ಕವನ್ನು ಇರಿಸತಕ್ಕದ್ದು.
3. ಮಂಡಳಿಯು ಸಂಬಂಧಿಸಿದ ಸ್ಥಳೀಯ ಜೀವವೈವಿಧ್ಯ ನಿರ್ವಾಹಣಾ ಸಮಿತಿಗಳೊಂದಿಗೆ ಸಮಾಲೋಚಿಸಿದ ಮತ್ತು ಅದು ಅಗತ್ಯವೆಂದು ಭಾವಿಸಿದರೆ ಹೆಚ್ಚಿನ ಮಾಹಿತಿಯನ್ನು ಅರ್ಜಿದಾರನಿಂದ ಹಾಗೂ ಇತರ ಮೂಲಗಳಿಂದ ಸಂಗ್ರಹಿಸಿದ ತರುವಾಯ, ಅರ್ಜಿಯನ್ನು, ಅದನ್ನು ಸ್ವೀಕರಿಸಿದ ದಿನಾಂಕದಿಂದ ಎರಡು ತಿಂಗಳ ಅವದಿಯೊಳಗೆ ಸಾಧ್ಯವಾದಷ್ಟು ಬೇಗನೆ ವಿಲೆ ಮಾಡತಕ್ಕದ್ದು.
4. ಅರ್ಜಿಯ ಅರ್ಹತೆ ಬಗ್ಗೆ ಮನವರಿಕೆ ಮಾಡಿಕೊಂಡ ಮೇಲೆ, ವಿಲೆ ಮಾಡುವ ಸಂದರ್ಭದಲ್ಲಿ ಮಂಡಳಿಯು ಉಪನಿಯಮ 3 ರಡಿಯಲ್ಲಿ ಜೈವಿಕ ಸಂಪನ್ಮೂಲಗಳ ಸಂರಕ್ಷಣೆ, ಸುಸ್ಥಿರ ಬಳಕೆ, ಈ ಸಂಪನ್ಮೂಲಗಳ ವಹಿವಾಟಿನಿಂದ ಬರುವ ಲಾಭದ ನ್ಯಾಯಯುತ ಹಂಚಿಕೆಗೆ ಬಾಧಕವಾಗುವಂತಹ ಅಂಶಗಳಿದ್ದಲ್ಲಿ ಅದನ್ನು ನಿರ್ಬಂಧಿಸುವ ಅಥವಾ ನಿಷೇಧಿಸುವ ಆಜ್ಞೆ ಹೊರಡಿಸಬಹುದಾಗಿದೆ. ಆದರೆ, ಇಂತಹ ಆಜ್ಞೆಯ ಪೂರ್ವದಲ್ಲಿ ಆಯಾ ವ್ಯಕ್ತಿಯ ಅಹವಾಲನ್ನು ಹೇಳಿಕೊಳ್ಳಲು ಯುಕ್ತ ಅವಕಾಶವನ್ನು ನೀಡತಕ್ಕದ್ದು.
5. ಮಂಡಳಿಯ ಅಧಿಕೃತ ಅಧಿಕಾರಿಯ ಮತ್ತು ಅರ್ಜಿದಾರನ ಸಹಿ ಇರುವ ಲಿಖಿತ ಒಪ್ಪಂದದ ಮೂಲಕ ಹೊಂದುವಿಕೆ/ ಸಂಗ್ರಹಣೆಯನ್ನು ನಿಯಂತ್ರಿಸಬಹುದಾಗಿದೆ. ಮಂಡಳಿಯು ಒಪ್ಪಂದದ ಸ್ವರೂಪವನ್ನು ನಿರ್ಧರಿಸಬಹುದಾಗಿದೆ.
6. ಸಂಪನ್ಮೂಲಗಳ ಸಂರಕ್ಷಣೆ ಮತ್ತು ಜೋಪಾನಗೊಳಿಸುವ ಉದ್ದೇಶಕ್ಕಾಗಿ ಅವುಗಳನ್ನು ಹೊಂದುವ/ಸಂಗ್ರಹಿಸುವ ಮಂಜೂರಾತಿಯನ್ನು ನೀಡುವ ಮೊದಲು ಆಯಾ ಉದ್ದೇಶಕ್ಕಾಗಿ ವಿಶೇಷ ನಿಬಂಧನೆಗಳನ್ನು ವಿಧಿಸಬಹುದಾಗಿದೆ.
7. ಉಪನಿಯಮ(1) ರಡಿ ಸಲ್ಲಿಸಿದ ಪ್ರಪತ್ರದಲ್ಲಿ ಭರ್ತಿಗೊಳಿಸಿದ ಮಾಹಿತಿಗಳನ್ನು ಗೌಪ್ಯವಾಗಿ ಇರಿಸತಕ್ಕದ್ದು ಹಾಗು ತಿಳಿದೋ ಅಥವಾ ತಿಳಿಯದೋ ಇತರರಿಗೆ ಬಹಿರಂಗ ಪಡಿಸುವಂತಿಲ್ಲ.

16. **ಜೈವಿಕ ಸಂಪನ್ಮೂಲಗಳನ್ನು ಪ್ರವೇಶಿಸುವ ಅವಕಾಶದ ಅಥವಾ ಅನುಮೋದನೆಯ ರದ್ದಿಯಾತಿ:**

1. ಮಂಡಳಿಯು ಜೈವಿಕ ಸಂಪನ್ಮೂಲಗಳ ಪ್ರವೇಶಕ್ಕೆ ನೀಡಲಾದ ಅನುಮೋದನೆಯನ್ನು ಯಾವುದೇ ದೂರಿನ ಆಧಾರದ ಮೇಲಾಗಲಿ ಅಥವಾ ಸ್ವಪ್ರೇರಣೆಯಿಂದಾಗಲೀ ಹಿಂತೆಗೆದುಕೊಳ್ಳಬಹುದು ಮತ್ತು ಈ ಕೆಳಕಂಡ ಷರತ್ತುಗಳ ಮೇರೆಗೆ ಲಿಖಿತ ಕರಾರನ್ನು ರದ್ದುಗೊಳಿಸಬಹುದು; ಎಂದರೆ;
   - (i) ಯಾರಿಗೆ ಅನುಮೋದನೆ ನೀಡಲಾಗಿದೆಯೋ ಆ ವ್ಯಕ್ತಿಯು, ಅಧಿನಿಯಮದ ಉಪಬಂಧಗಳನ್ನು ಅಥವಾ ಯಾವ ಷರತ್ತಿನ ಮೇಲೆ ಅನುಮೋದನೆಯನ್ನು ನೀಡಲಾಗಿದೆಯೋ ಆ ಷರತ್ತನ್ನು ಉಲ್ಲಂಘಿಸಿದ್ದಾನೆಂಬ ಯುಕ್ತ ನಂಬಿಕೆಯ ಆಧಾರದ ಮೇಲೆ;
   - (ii) ಯಾವ ವ್ಯಕ್ತಿಗೆ ಅನುಮೋದನೆಯನ್ನು ನೀಡಲಾಗಿದೆಯೋ ಆ ವ್ಯಕ್ತಿಯು, ಒಪ್ಪಂದದ ನಿಬಂಧನೆಗಳನ್ನು ಪಾಲಿಸಲು ವಿಫಲನಾದಾಗ;
   - (iii) ನೀಡಿರುವ, ಜೈವಿಕ ಸಂಪನ್ಮೂಲಗಳನ್ನು ಹೊಂದುವ ಪ್ರವೇಶಾವಕಾಶದ ಯಾವುದೇ ಷರತ್ತುಗಳನ್ನು ಪಾಲಿಸಲು ವಿಫಲನಾದಲ್ಲಿ;
   - (iv) ಸಾರ್ವಜನಿಕ ಹಿತಾಸಕ್ತಿ ಅಥವಾ ಪರಿಸರ ಸಂರಕ್ಷಣೆ ಮತ್ತು ಜೈವಿಕ ವೈವಿಧ್ಯ ಸಂರಕ್ಷಣೆಯನ್ನು ತಿರಸ್ಕರಿಸಿರುವ ಆಧಾರದ ಮೇಲೆ ಮತ್ತು ಸ್ಥಳೀಯ ಸಮುದಾಯಗಳ ಹಕ್ಕುಗಳು ಜೀವನಾಧಾರ ವಿಷಯಗಳು ಮತ್ತು ಜ್ಞಾನ ಪರಂಪರೆಗಳ ಸಂರಕ್ಷಣೆಗೆ ಧಕ್ಕೆಯಾದಲ್ಲಿ;
2. ಈ ರದ್ದಿಯಾತಿಯ ಆಜ್ಞೆಗಳನ್ನು ಹೊರಡಿಸುವುದಕ್ಕೆ ಮೊದಲು ಅದರಿಂದ ಹಾನಿಗೊಳಗಾಗುವ ವ್ಯಕ್ತಿಯ ಅಹವಾಲನ್ನು ಸಂಪೂರ್ಣ ವಿಚಾರಣೆಯ ಮೂಲಕ ಸರಿಯಾಗಿ ಆಲಿಸತಕ್ಕದ್ದು.

3. ಮಂಡಳಿಯು ತಾನು ಹೊರಡಿಸಿದ ರದ್ದಿಯಾತಿಯ ಪ್ರತಿಯೊಂದನ್ನು ಸಂಬಂಧಪಟ್ಟ ಜೈವಿಕವೈವಿಧ್ಯನಿರ್ವಹಣಾ ಸಮಿತಿಗೆ,ಜೈವಿಕ ಸಂಪನ್ಮೂಲಗಳನ್ನು ಹೊಂದುವ ಅವಕಾಶವನ್ನು ನಿಷೇಧಿಸಲು ಹಾಗೂ ಯಾವುದೇ ಹಾನಿ ಆಗಿದ್ದರೆ, ಆ ಹಾನಿಯನ್ನು ನಿರ್ಧರಿಸಲು ಹಾಗೂ ಆ ಹಾನಿಯನ್ನು ವಸೂಲಿ ಮಾಡುವುದಕ್ಕೆ ಸೂಕ್ತಕ್ರಮಕ್ಕೈಗೊಳ್ಳತಕ್ಕದ್ದು.

**17. ಜೈವಿಕ ಸಂಪನ್ಮೂಲಗಳನ್ನು ಹೊಂದುವ ಅವಕಾಶಕ್ಕೆ ಸಂಬಂಧಿಸಿದ ಚಟುವಟಿಕೆಗಳ ಮೇಲೆ ನಿರ್ಬಂಧ:**

(1) ಮಂಡಳಿಯು, ಅದು ಅಗತ್ಯ ಹಾಗೂ ಯುಕ್ತವೆಂದು ಭಾವಿಸಿದರೆ, ಈ ಕೆಳಕಂಡ ಕಾರಣಗಳಿಗಾಗಿ ಜೈವಿಕ ಸಂಪನ್ಮೂಲಗಳನ್ನು ಹೊಂದುವ ಪ್ರವೇಶಾವಕಾಶಕ್ಕಾಗಿ ಮಾಡಿಕೊಂಡಿರುವ ಕೋರಿಕೆಯನ್ನು ನಿರ್ಬಂಧಿಸಲು ಅಥವಾ ನಿಷೇಧಿಸಲು ಕ್ರಮಗಳನ್ನು ಕೈಗೊಳ್ಳತಕ್ಕದ್ದು: ಏನದರೆ:

i. ಜೈವಿಕ ಸಂಪನ್ಮೂಲಗಳನ್ನು ಹೊಂದುವ ಅವಕಾಶದ ಕೋರಿಕೆಯು ಅಳಿವಿನಂಚಿನಲ್ಲಿರುವ ಯಾವುದೇ ಪ್ರಭೇದಕ್ಕಾಗಿ ಯಾಗಿದ್ದರೆ:

ii. ಹೊಂದುವ ಅವಕಾಶದ ಕೋರಿಕೆಯು ಯಾವುದೇ ಪ್ರಾದೇಶಿಕ ಹಾಗೂ ವಿರಳ ಪ್ರಭೇದಕ್ಕಾಗಿಯಾಗಿದ್ದರೆ:

iii. ಹೊಂದುವ ಅವಕಾಶದ ಕೋರಿಕೆಯು, ಸ್ಥಳೀಯ ಜನತೆಯ ಜೀವನಾಧಾರದ ಮೇಲೆ ಪ್ರತಿಕೂಲ ಪರಿಣಾಮವನ್ನು ಉಂಟು ಮಾಡಬಹುದಾದ ಸಾಧ್ಯತೆ ಇದ್ದರೆ:

iv. ಹೊಂದುವ ಅವಕಾಶದ ಕೋರಿಕೆಯು, ಪರಿಸರದ ಮೇಲೆ ನಿಯಂತ್ರಿಸಲು ಹಾಗೂ ತಗ್ಗಿಸಲು ಕಷ್ಟವಾಗಬಹುದಾದಂಥ ಪ್ರತಿಕೂಲ ಪರಿಣಾಮವನ್ನುಂಟು ಮಾಡಬಹುದಾದ ಸಾಧ್ಯತೆ ಇದ್ದರೆ:

v. ಹೊಂದುವ ಅವಕಾಶದ ಕೋರಿಕೆಯು, ತಳಿನಾಶಕ್ಕೆ ಕಾರಣವಾಗ ಬಹುದಾದ ಅಥವಾ ಜೀವಿ ಪರಿಸ್ಥಿತಿಯ ಕ್ರಿಯೆಗೆ ತೊಂದರೆಯುಂಟು ಮಾಡಬಹುದಾದ ಸಾಧ್ಯತೆ ಇದ್ದರೆ:

vi. ರಾಷ್ಟ್ರೀಯ ಹಿತಾಸಕ್ತಿಗೆ ಹಾಗೂ ಭಾರತವು ಮಾಡಿಕೊಂಡ ಇತರ ಸಂಬಂಧಪಟ್ಟ ಅಂತರರಾಷ್ಟ್ರೀಯ ಒಪ್ಪಂದಗಳಿಗೆ ವಿರುದ್ಧವಾದ ಉದ್ದೇಶಗಳಿಗೆ ಸಂಪನ್ಮೂಲಗಳನ್ನು ಬಳಸುವುದು.

(2) ಈ ನಿರ್ಬಂಧದಿಂದ ಹಾನಿಗೊಳಗಾಗುವ ವ್ಯಕ್ತಿಯ ಸಂಪೂರ್ಣ ಅಹವಾಲನ್ನು ಕೇಳುವುದಲ್ಲದೆ ಅಂತಹ ನಿರ್ಬಂಧಕಾಜ್ಞೆ ಹೊರಡಿಸುವ ಮೊದಲು ನಡೆಸುವ ವಿಚಾರಣೆಗಳಲ್ಲಿ ಸ್ಥಳೀಯ ಸಂಸ್ಥೆಗಳ ಹಾಗು ಜೀವವೈವಿಧ್ಯ ನಿರ್ವಹಣಾ ಸಮಿತಿಗಳ ಸಲಹೆಗಳನ್ನು ಪಡೆಯತಕ್ಕದ್ದು.

**18. ರಾಜ್ಯ ಜೀವವೈವಿಧ್ಯ ನಿಧಿಯ ನಿರ್ವಹಣೆ:**

1. ರಾಜ್ಯ ಜೀವವೈವಿಧ್ಯ ನಿಧಿಯ ನಿರ್ವಹಣೆಯನ್ನು ಮಂಡಳಿಯ ಸದಸ್ಯ ಕಾರ್ಯದರ್ಶಿ ಅಥವಾ ಈ ಕೆಲಸಕ್ಕಾಗಿ ಮಂಡಳಿಯು ಅಧಿಕೃತಗೊಳಿಸಿದ ಇತರ ಯಾವುದೇ ಅಧಿಕಾರಿಯು ನಿರ್ವಹಿಸತಕ್ಕದ್ದು.
2. ಈ ನಿಧಿಯು ಎರಡು ಪ್ರತ್ಯೇಕ ಲೆಕ್ಕ ಶೀರ್ಷಿಕೆಗಳನ್ನೊಂದಿರತಕ್ಕದ್ದು. ಒಂದು ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಹಾಗೂ ರಾಷ್ಟ್ರೀಯ ಜೈವಿಕವೈವಿಧ್ಯ ಪ್ರಾಧಿಕಾರ ಮತ್ತು ಇನ್ನೊಂದು ಮಂಡಳಿಯ ಶುಲ್ಕ, ಲೈಸೆನ್ಸ್ ಶುಲ್ಕ, ಸ್ವಾಮ್ಯ ಶುಲ್ಕ ಮತ್ತು ಇತರ ಸ್ವೀಕೃತಿಗಳಿಗೆ ಸಂಬಂಧಿಸಿದಾಗಿರತಕ್ಕದ್ದು.
3. ಸರ್ಕಾರವು ವಿಧಾನಮಂಡಲದ ಅಂಗೀಕಾರದೊಂದಿಗೆ ಅಧಿನಿಯಮದ ಉದ್ದೇಶಗಳಿಗಾಗಿ ವಿನಿಯೋಗಿಸಲು ಅಗತ್ಯವೆನಿಸುವಷ್ಟು ಅರ್ಹ ಅನುದಾನದ ಮೊಬಲಗನ್ನು ಮಂಡಳಿಗೆ ಪಾವತಿಸತಕ್ಕದ್ದು.
4. ಈ ನಿಧಿಯ ನಿರ್ವಹಣೆ ಮತ್ತು ಬಳಕೆಯು ಪಾರದರ್ಶಕ ಮತ್ತು ಸಾರ್ವಜನಿಕ ಬಾಧ್ಯತೆವುಳ್ಳದ್ದಾಗಿರಲು ಮಂಡಳಿಯು ಸಮರ್ಥ ಮಾರ್ಗದರ್ಶನದ ಮೂಲಕ ನಿರ್ಣಯಗಳನ್ನು ಕೈಗೊಳತಕ್ಕದ್ದು.

**19. ವಾರ್ಷಿಕ ವರದಿ ಮತ್ತು ವಾರ್ಷಿಕ ಲೆಕ್ಕಪತ್ರ ಮಂಡನೆ:**

1. ಮಂಡಳಿಯು ಪ್ರತಿ ಆರ್ಥಿಕ ವರ್ಷದಲ್ಲಿ ಕೈಗೊಂಡ ಚಟುವಟಿಕೆಗಳನ್ನು ವಾರ್ಷಿಕ ವರದಿಯಲ್ಲಿ ವಿವರಿಸುವ ಮತ್ತು ಪರಿಶೋಧಿತ ಲೆಕ್ಕಪತ್ರಗಳ ವರದಿಯನ್ನು ತಯಾರಿಸಿ ಸರ್ಕಾರಕ್ಕೆ ಒದಗಿಸತಕ್ಕದ್ದು.
2. ಮಂಡಳಿಯು, ರಾಜ್ಯದ ಮಹಾಲೇಖಪಾಲರೊಂದಿಗೆ ಸಮಾಲೋಚಿಸಿ, ಅವರು ನಿಯಮಿಸಲಾದಂತ ರೀತಿಯಲ್ಲಿ ಆಯವ್ಯಯವನ್ನು ಸಿದ್ದಪಡಿಸತಕ್ಕದ್ದು. ಮಂಡಳಿಯು ಪ್ರಮಾಣೀಕೃತವಾದ ರಾಜ್ಯ ಜೈವಿಕವೈವಿಧ್ಯ ನಿಧಿಯ ಲೆಕ್ಕ ಪತ್ರಗಳ ಪ್ರತಿಯನ್ನು ಅದರ ಮೇಲಿನ ಪರಿಶೋಧನಾ ವರದಿಯ ಜೊತೆಯಲ್ಲಿ ಪ್ರತಿವರ್ಷ ಅಕ್ಟೋಬರ್ 15 ರೊಳಗೆ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.
3. ಮಂಡಳಿಯ ಪ್ರತಿವರ್ಷ ಅಕ್ಟೋಬರ್ 15 ರೊಳಗೆ ಹಿಂದಿನ ಆರ್ಥಿಕ ವರ್ಷದ ವಾರ್ಷಿಕ ವರದಿಯನ್ನು ನಮೂನೆ-II ರಂತೆ ಸಿದ್ದಪಡಿಸಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.
4. ಸರಕಾರವು, ಮಂಡಳಿಯ ವಾರ್ಷಿಕ ವರದಿ ಮತ್ತು ಲೆಕ್ಕ ಪರಿಶೋಧನಾ ವರದಿಗಳನ್ನು, ಸ್ವೀಕರಿಸಿದ ನಂತರ ಸಾಧ್ಯವಾದಷ್ಟು ಬೇಗನೆ ರಾಜ್ಯ ವಿಧಾನ ಮಂಡಲಗಳ ಮುಂದೆ ಮಂಡಿಸುವಂತೆ ಕ್ರಮ ಕೈಗೊಳ್ಳತಕ್ಕದ್ದು.

**20. ಜೈವಿಕವೈವಿಧ್ಯ ಪರಂಪರಾಗತ ತಾಣಗಳು:**

1) ಸ್ಥಳೀಯ ಸಂಸ್ಥೆಗಳೊಂದಿಗೆ ಹಾಗೂ ಇತರ ಪಾಲುದಾರರೊಂದಿಗೆ ಮಂಡಳಿಯು ಸಮಾಲೋಚಿಸಿ ಜೀವವೈವಿಧ್ಯದ ಮೌಲ್ಯಗಳ ವಿಶಿಷ್ಟ ತಾಣಗಳನ್ನು ಪರಂಪರಾಗತ ತಾಣಗಳೆಂದು ಗುರುತಿಸಲು ಸೂಕ್ತ ಅವಶ್ಯ ಕ್ರಮಗಳನ್ನು ಕೈಗೊಳ್ಳತಕ್ಕದ್ದು.

ಮಂಡಳಿಯ ಶಿಫಾರಸ್ಸುಗಳ ಮೇರೆಗೆ ಹಾಗೂ ಕೇಂದ್ರ ಸರ್ಕಾರದ ಜೊತೆ ಸಮಾಲೋಚಿಸಿ ರಾಜ್ಯ ಸರ್ಕಾರವು ಈ ಕುರಿತು ಸೂಕ್ತ ಪ್ರಕಟಣೆಗಳನ್ನು ಹೊರಡಿಸತಕ್ಕದ್ದು.

**21. ಜೈವಿಕವೈವಿಧ್ಯ ನಿರ್ವಹಣಾ ಸಮಿತಿಯ ರಚನೆ:**

1) ಪ್ರತಿಯೊಂದು ಸ್ಥಳೀಯ ಸಂಸ್ಥೆಯು, ಅದರ ಕ್ಷೇತ್ರ ವ್ಯಾಪ್ತಿಯ ಪ್ರದೇಶದೊಳಗೆ ಒಂದು ಜೈವಿಕವೈವಿಧ್ಯ ನಿರ್ವಹಣಾ ಸಮಿತಿ (BMC) ಯನ್ನು ರಚಿಸತಕ್ಕದ್ದು.

2) 1ನೇ ಉಪನಿಯಮದಡಿ ರಚಿಸಲಾದಂಥ ಈ ಸಮಿತಿಯು ಸ್ಥಳೀಯ ಸಂಸ್ಥೆಯಿಂದ ನಾಮನಿರ್ದೇಶಿತರಾದ ಏಳು ಜನಕ್ಕಿಂತ ಹೆಚ್ಚಿಲ್ಲದಷ್ಟು ಸಂಖ್ಯೆಯ ಸದಸ್ಯರನ್ನು ಹೊಂದಿರತಕ್ಕದ್ದು. ಅವರಲ್ಲಿ 1/3 ಕ್ಕಿಂತ ಕಡಿಮೆ ಇಲ್ಲದಷ್ಟು ಮಹಿಳೆಯರು ಇರತಕ್ಕದ್ದು ಮತ್ತು ಶೇ. 18 ಕ್ಕಿಂತ ಕಡಿಮೆ ಇಲ್ಲದಷ್ಟು ಸದಸ್ಯರು ಪರಿಶಿಷ್ಟ ಜಾತಿ/ ಪಂಗಡಗಳಿಗೆ ಸೇರಿದವರಾಗಿರತಕ್ಕದ್ದು.

3) ಈ ಸಮಿತಿಯ ಅಧ್ಯಕ್ಷನನ್ನು, ಸ್ಥಳೀಯ ಸಂಸ್ಥೆಯ ಅಧ್ಯಕ್ಷನು ಅಧ್ಯಕ್ಷನಾಗಿರುವ ಸಭೆಯಲ್ಲಿ ಸಮಿತಿಯ ಸದಸ್ಯರುಗಳ ಪೈಕಿಯಿಂದ ಚುನಾಯಿಸತಕ್ಕದ್ದು.ಮತಗಳು ಸರಿಸಮನಾಗಿ ಬಿದ್ದ ಸಂದರ್ಭದಲ್ಲಿ ಸ್ಥಳೀಯ ಸಂಸ್ಥೆಯ ಅಧ್ಯಕ್ಷನು ನಿರ್ಣಾಯಕ ಮತಗಳನ್ನು ಚಲಾಯಿಸತಕ್ಕದ್ದು.

4) ಈ ಸಮಿತಿಯ ಅಧ್ಯಕ್ಷನು ಮತ್ತು ಸದಸ್ಯರು ಆಯ್ಕೆಗೊಂಡ ದಿನಾಂಕದಿಂದ ಮೂರು ವರ್ಷಗಳು ಅಥವಾ ಸ್ಥಳೀಯ ಸಂಸ್ಥೆಯ ಸದಸ್ಯತ್ವದ ಅವಧಿ ಯಾವುದೂ ಮೊದಲು ಮುಕ್ತಾಯವಾಗುತ್ತದೆಯೋ ಅಲ್ಲಿಯವರೆಗೆ ತಮ್ಮ ಪದಾವಧಿಯನ್ನೊಂದಿರುತ್ತಾರೆ.

5) ಸ್ಥಳೀಯ ವಿಧಾನ ಸಭೆಯ ಸದಸ್ಯ,ವಿಧಾನ ಪರಿಷತ್ತಿನ ಸದಸ್ಯ ಮತ್ತು ಸಂಸತ್ ಸದಸ್ಯನು ಈ ಸಮಿತಿಯ ಸಭೆಗಳಿಗೆ ವಿಶೇಷ ಆಹ್ವಾನಿತರಾಗಿರತಕ್ಕದ್ದು.

6) ಈ ಕೆಳಗಿನ ಅಧಿಕಾರಿಗಳು ಮುಂದೆ ತೋರಿಸಿರುವ ಆಯಾ ಜೈವಿಕವೈವಿಧ್ಯನಿರ್ವಹಣಾ ಸಮಿತಿಗಳ ಕಾರ್ಯದರ್ಶಿಗಳಾಗಿರತಕ್ಕದ್ದು.

| | ಜೈವಿಕ ನಿರ್ವಹಣಾ ಸಮಿತಿ | | ಕಾರ್ಯದರ್ಶಿ |
|---|---|---|---|
| i) | ಗ್ರಾಮಪಂಚಾಯತ್ | - | ಗ್ರಾ.ಪಂ.ಕಾರ್ಯದರ್ಶಿ |
| ii) | ತಾಲ್ಲೂಕಪಂಚಾಯತ್ | - | ತಾ.ಪಂ.ಕಾರ್ಯನಿರ್ವಹಣಾಧಿಕಾರಿ |
| iii) | ಜಿಲ್ಲಾಪಂಚಾಯತ್ | - | ಜಿ.ಪಂ.ಮುಖ್ಯ ಕಾರ್ಯನಿರ್ವಹಣಾಧಿಕಾರಿ |
| iv) | ನಗರಸಭೆ/ಪುರಸಭೆ | - | ನ.ಸ./ಪು.ಸ. ಮುಖ್ಯಾಧಿಕಾರಿ |
| v) | ಮಹಾನಗರಪಾಲಿಕೆ | - | ಪಾಲಿಕೆ ಆಯುಕ್ತರು |

7) ಜೈವಿಕವೈವಿಧ್ಯ ನಿರ್ವಹಣಾ ಸಮಿತಿಯ ಮುಖ್ಯಪ್ರಕಾರ್ಯವೆಂದರೆ, ಸ್ಥಳೀಯ ಜನರೊಡನೆ ಸಮಾಲೋಚಿಸಿ ಜನತಾ ಜೀವವೈವಿಧ್ಯ ರಿಜಿಸ್ಟರ್‌ನ್ನು ಸಿದ್ಧಪಡಿಸುವುದು. ಈ ರಿಜಿಸ್ಟರ್, ಸ್ಥಳೀಯ ಜೈವಿಕ ಸಂಪನ್ಮೂಲಗಳ ಲಭ್ಯತೆ ಮತ್ತು ಜ್ಞಾನ, ಅವುಗಳ ಔಷಧೀಯ ಅಥವಾ ಯಾವುದೇ ಇತರ ಬಳಕೆ ಅಥವಾ ಅವುಗಳ ಬಗೆಗಿನ ಯಾವುದೇ ಇತರ ಸಾಂಪ್ರದಾಯಿಕ ಜ್ಞಾನ- ಇವುಗಳ ಸಮಗ್ರ ಮಾಹಿತಿಯನ್ನು ಹೊಂದಿರತಕ್ಕದ್ದು.

8) ಜೈವಿಕವೈವಿಧ್ಯ ನಿರ್ವಹಣಾ ಸಮಿತಿಯ ಇತರ ಪ್ರಕಾರ್ಯವೆಂದರೆ ಅದಕ್ಕೆ ಜೀವವೈವಿಧ್ಯ ಪ್ರಾಧಿಕಾರ ಅಥವಾ ಮಂಡಳಿಯಿಂದ ಬಂದ ಅರ್ಜಿಗಳಿಗೆ ಅಂಗೀಕಾರ ಅಥವಾ ಸಲಹೆ ಮತ್ತು ಸ್ಥಳೀಯ ವೈದ್ಯರ ಮತ್ತು ಚಿಕಿತ್ಸಕರ ಮಾಹಿತಿಗಳನ್ನು ಹೊಂದಿರತಕ್ಕದ್ದು.

9) ಈ ಜನತಾ ಜೈವಿಕವೈವಿಧ್ಯ ರಿಜಿಸ್ಟರನ್ನು ತಯಾರಿಸುವ ನಮೂನೆಗಳನ್ನು ಮತ್ತು ಈ ದಾಖಲೆಗಳನ್ನು ವಿದ್ಯುನ್ಮಾನ ಮಾಹಿತಿ ಜಾಲಕ್ಕೆ ಅಳವಡಿಸುವಂತಹ ವ್ಯವಸ್ಥೆಯನ್ನು ಜೈವಿಕವೈವಿಧ್ಯ ಪ್ರಾಧಿಕಾರವು ಮಾಡತಕ್ಕದ್ದು.

10) ಸೂಚಿಸುವ ರೀತಿಯಲ್ಲಿ. ಈ ರಿಜಿಸ್ಟರ್ ತಯಾರಿಕೆಯಲ್ಲಿ ಜೈವಿಕವೈವಿಧ್ಯ ನಿರ್ವಹಣಾ ಸಮಿತಿಗೆ ರಾಷ್ಟ್ರೀಯ ಜೈವಿಕವೈವಿಧ್ಯ ಪ್ರಾಧಿಕಾರ ಹಾಗೂ ರಾಜ್ಯ ಜೈವಿಕವೈವಿಧ್ಯ ಮಂಡಳಿಯ ಮಾರ್ಗದರ್ಶನ ಮತ್ತು ತಾಂತ್ರಿಕ ಬೆಂಬಲ ನೀಡತಕ್ಕದ್ದು.

11) ಜನತಾ ಜೈವಿಕವೈವಿಧ್ಯ ರಿಜಿಸ್ಟರ್‌ಗಳನ್ನು ತಯಾರಿಸಿ ಇಟ್ಟುಕೊಳ್ಳುವ ಹಾಗೂ ಸಿಂಧುಗೊಳಿಸುವ ಕಾರ್ಯ ಸ್ಥಳೀಯ ಜೀವವೈವಿಧ್ಯ ನಿರ್ವಹಣಾ ಸಮಿತಿಗಳ ದ್ದಾಗಿರುತ್ತದೆ.

12) ಈ ಸಮಿತಿಗಳು ಇನ್ನೊಂದು ರಿಜಿಸ್ಟರ್‌ನಲ್ಲಿ ಸ್ಥಳೀಯ ಸಂಪನ್ಮೂಲ ಮತ್ತು ಜ್ಞಾನ ಪರಂಪರೆಗಳನ್ನು ನೀಡಿದ ಮಾಹಿತಿಗಳನ್ನು ಇರಿಸಿಕೊಳ್ಳತಕ್ಕದ್ದು ಹಾಗೂ ವಿಧಿಸಿದ ಶುಲ್ಕ ಮತ್ತು ಬಂದಿರುವ ಲಾಭಗಳ ಹಾಗೂ ಹಂಚುವಿಕೆಯ ವಿವರಗಳನ್ನು ಇರಿಸಿಕೊಳ್ಳತಕ್ಕದ್ದು.

**22. ಸ್ಥಳೀಯ ಜೈವಿಕವೈವಿಧ್ಯ ನಿಧಿ:**

1. ಅಧಿನಿಯಮದ ಪ್ರಕರಣ 42, 43 ಮತ್ತು 44 ರಲ್ಲಿ ಪ್ರದತ್ತವಾದಂತೆ ಸ್ಥಳೀಯ ಜೈವಿಕವೈವಿಧ್ಯ ನಿಧಿಯನ್ನು ಆಯಾ ಸ್ಥಳೀಯ ಜೈವಿಕವೈವಿಧ್ಯ ನಿರ್ವಹಣಾ ಸಮಿತಿಯ ಅಧ್ಯಕ್ಷರ ಸಹಿ ಮತ್ತು ಮೊಹರಿನೊಂದಿಗೆ ರಚಿಸಿ ನಿರ್ವಹಿಸತಕ್ಕದ್ದು. ಈ ನಿಧಿಯು ಎರಡು ಪ್ರತ್ಯೇಕ ಲೆಕ್ಕ ಶೀರ್ಷಿಕೆಗಳನ್ನು ಹೊಂದಿರತಕ್ಕದ್ದು. ಒಂದು ರಾಷ್ಟ್ರೀಯ ಜೈವಿಕವೈವಿಧ್ಯ ಪ್ರಾಧಿಕಾರ, ಕೇಂದ್ರ ಹಾಗೂ ಸರ್ಕಾರ ಮತ್ತು ರಾಜ್ಯ ಜೈವಿಕವೈವಿಧ್ಯ ಮಂಡಳಿಯಿಂದ ಸ್ವೀಕರಿಸಿದ ಸ್ವೀಕೃತಿಗಳಿಗೆ ಸಂಬಂಧಿಸಿದ್ದಾಗಿರತಕ್ಕದ್ದು ಮತ್ತು ಇನ್ನೊಂದು ಸಮಿತಿಯ ಶುಲ್ಕ ಹಾಗೂ ಇತರ ಸ್ವೀಕೃತಿಗಳಿಗೆ ಸಂಬಂಧಿಸಿದ್ದಾಗಿರತಕ್ಕದ್ದು.
2. ಸ್ಥಳೀಯ ಜೈವಿಕವೈವಿಧ್ಯ ನಿಧಿಯಿಂದ ಮೊತ್ತವನ್ನು ಆಯಾ ಸಮಿತಿಯ ಅಧ್ಯಕ್ಷರು ಮತ್ತು ಕಾರ್ಯದರ್ಶಿಯ ಜಂಟಿ ಸಹಿಯೊಂದಿಗೆ ತೆಗೆಯತಕ್ಕದ್ದು.
3. ಸ್ಥಳೀಯ ಜೈವಿಕವೈವಿಧ್ಯ ನಿಧಿಯ ಲೆಕ್ಕಗಳನ್ನು, ರಾಜ್ಯದ ಮಹಾಲೇಖಪಾಲರೊಂದಿಗೆ ಸಮಾಲೋಚಿಸಿ, ನಿಯಮಿಸಬಹುದಾದಂತಹ ರೀತಿಯಲ್ಲಿ ನಿರ್ವಹಿಸತಕ್ಕದ್ದು ಮತ್ತು ಪರಿಶೋಧನೆ ಮಾಡತಕ್ಕದ್ದು.
4. ಜೈವಿಕವೈವಿಧ್ಯ ನಿಧಿಯ ಹಿಂದಿನ ಆರ್ಥಿಕ ವರ್ಷದ ವಾರ್ಷಿಕ ವರದಿಯನ್ನು ನಮೂನೆ-III ರಲ್ಲಿ ನಮೂದಿಸಿದಂತೆ ತಯಾರಿಸತಕ್ಕದ್ದು.

